ಉಪನ್ಯಾಸ ಗ್ರಂಥಮಾಲೆ

೩೬

# ಭಾರತದಲ್ಲಿ ಗ್ರಂಥಾಲಯ ಪ್ರಸಾರ

ಕೆ. ಎಸ್. ದೇಶಪಾಂಡೆ, ಎಂ. ಎ., ಡಿಪ್. ಲಿಬ್.

ಲೈಬ್ರೇರಿಯನ್, ಬೆಂಗಳೂರು ವಿಶ್ವವಿದ್ಯಾಲಯ



ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ಮಾರ್ಚ, ೧೯೬೮

# ಉಪನ್ಯಾಸ ಗ್ರಂಥಮಾಲೆಯ ಪುಸ್ತಕಗಳು

ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ

೧. ಭವಭೂತಿ (ಎರಡನೆಯ ಆವೃತ್ತಿ) - ಕೆ. ಕೃಷ್ಣಮೂರ್ತಿ
೨. ಮನೋರೋಗಗಳು ,, - ಎನ್. ಆರ್. ಕುಲಕರ್ಣಿ
೩. ಪ್ರಥಮ ಪಂಚವಾರ್ಷಿಕ ಯೋಜನೆ ಹಾಗೂ ಒಕ್ಕಲತನ - ಎಸ್. ಪಿ. ಪಾಟೀಲ
೪. ಗಾದೆಗಳು (ಮೂರನೆಯ ಆವೃತ್ತಿ) - ಎ. ಕೆ. ರಾಮಾನುಜನ್
೫. ಭಾರತದಲ್ಲಿ ಜಾತಿಪದ್ಧತಿ (ದ್ವಿ. ಆ.) - ವಿಕ್ಟರ್ ಎಸ್. ಡಿ'ಸೋಜಾ
೬. ಕೀಟಕ ಪಿಡುಗುಗಳ ಸಮೀಕ್ಷಣೆ ( ,, ) - ಎಸ್. ಎಸ್. ಕಟಗಿಹಳ್ಳಿಮಠ
೭. ರಾಜಕೀಯ ಪಕ್ಷಗಳು ( ,, ) - ಎನ್. ರಾಜಗೋಪಾಲರಾವ್
೮. ಸ್ವಾದಿ ಅರಸುಮನೆತನ ( ,, ) - ಎಸ್. ಎಸ್. ಮಾಳವಾಡ
೯. ಮಕ್ಕಳ ಶಿಕ್ಷಣ (ತೃತೀಯ ಆವೃತ್ತಿ) - ಡಿ. ಎಸ್. ಕರ್ಕಿ
೧೦. ಮೂಢ ನಂಬಿಕೆಗಳು ( ,, ) - ಎಲ್. ಆರ್. ಹೆಗಡೆ
೧೧. ಸಂಸ್ಕೃತ ಕವಯಿತ್ರಿಯರು (ದ್ವಿ. ಆ.) - ಕೆ. ಟಿ. ಪಾಂಡುರಂಗಿ
೧೨. ನಿತ್ಯಜೀವನದಲ್ಲಿ ರಸಾಯನಶಾಸ್ತ್ರ ( ,, ) - ಬಿ. ವಿರೂಪಾಕ್ಷಪ್ಪ
೧೩. ಸಾರ್ವಜನಿಕ ಆಡಳಿತ ( ,, ) - ಜಿ. ಎಸ್. ಹಾಲಪ್ಪ
೧೪. ವಿಚಾರವಾದ (ಎರಡನೆಯ ಆವೃತ್ತಿ) - ಗೌರೀಶ ಕಾಯ್ಕಿಣಿ
೧೫. ಮಹಾಕವಿ ಮಿಲ್ಟನ್ ( ,, ) - ಜಿ. ಎಸ್. ಆಮೂರ
೧೬. ಭಾರತದಲ್ಲಿ ಗ್ರಂಥಾಲಯ ಪ್ರಸಾರ - ಕೆ. ಎಸ್. ದೇಶಪಾಂಡೆ
೧೭. ಭಾರತೀಯ ನಾಗರಿಕತೆಗೆ ಮನುವಿನ ಕೊಡುಗೆ (ದ್ವಿ. ಆ.) - ಬಿ. ಎಚ್. ಶ್ರೀಧರ
೧೮. ಜನಸಂಖ್ಯೆ ಹಾಗೂ ಆಹಾರ ಸಮಸ್ಯೆ - ಪಿ. ಎಂ. ಉಮಾಕಾಂತಶಾಸ್ತ್ರಿ
೧೯. ಸೌರವ್ಯೂಹ - ಸಿ. ಎನ್. ಶ್ರೀನಿವಾಸ ಅಯ್ಯಂಗಾರ
೨೦. ಪ್ರಾಚೀನ ಭಾರತದಲ್ಲಿ ಸಾಮಾಜಿಕ ಜನಜೀವನ - ಸಿ. ವ್ಹಿ. ರಂಗಸ್ವಾಮಿ
೨೧. ಸಮಾಜಕಾರ್ಯ - ಎಚ್. ಎಂ. ಮರುಳಸಿದ್ಧಯ್ಯ
೨೨. ಸಂಸತ್ತಿನ ಕಾರ್ಯಪದ್ಧತಿ - ಎ. ಎಂ. ರಾಜಶೇಖರಯ್ಯ

ಉಪನ್ಯಾಸ ಗ್ರಂಥಮಾಲೆ

೧೬

# ಭಾರತದಲ್ಲಿ ಗ್ರಂಥಾಲಯ ಪ್ರಸಾರ

ಕೆ. ಎಸ್. ದೇಶಪಾಂಡೆ, ಎಂ.ಎ., ಡಿಪ್. ಲಿಬ್.

ಲೈಬ್ರೇರಿಯನ್, ಬೆಂಗಳೂರು ವಿಶ್ವವಿದ್ಯಾಲಯ




ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ಮಾರ್ಚ್, ೧೯೬೮

ಪ್ರಕಾಶಕರು:
ಎಸ್. ಎಸ್. ಒಡೆಯರ, ಎಂ.ಎ.,ಎಲ್‌ಎಲ್.ಬಿ.,
ರಜಿಸ್ಟ್ರಾರ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ, ೧೯೫೯ - ೨,೦೦೦ ಪ್ರತಿಗಳು
ದ್ವಿತೀಯ ಮುದ್ರಣ ೧೯೬೮-೨,೦೦೦ ಪ್ರತಿಗಳು



ಬೆಲೆ : ೨೫ ಪೈಸೆ

ಮುದ್ರಕರು:
ಎಂ. ಎಂ. ಹೊರಡಿ
ಕ್ವಾಲಿಟಿ ಪ್ರಿಂಟರ್ಸ್, ಧಾರವಾಡ-೧

# ಮುನ್ನುಡಿ

ನಮ್ಮ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗವು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿ ತಿಂಗಳು ಏರ್ಪಡಿಸುತ್ತಿರುವ ಉಪನ್ಯಾಸ ಶಿಬಿರಗಳು ದಿನೇ ದಿನೇ ಜನಪ್ರಿಯವಾಗುತ್ತ ಸಾಗಿರುವುದು ನಿಜವಾಗಿಯೂ ಸಂತೋಷದ ಸಂಗತಿ. ಈ ಜ್ಞಾನಪ್ರಸಾರದ ಕಾರ್ಯದಲ್ಲಿ ಭಾಗವಹಿಸುವುದರಿಂದ ವಿಶ್ವ ವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕವೊದಗುವದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭವಾದ ಶೈಲಿಯಲ್ಲಿ ಬರೆವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನ-ಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೆ ಎಪ್ಪತ್ತೊಮ್ಮರು ಪುಸ್ತಕಗಳು ಪ್ರಕಟವಾಗಿವೆ. ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ಎರಡು-ಮೂರು ಮುದ್ರಣಗಳನ್ನೂ ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯ ಧನಸಹಾಯ ಆಯೋಗದವರು ಉಪನ್ಯಾಸ ಶಿಬಿರಗಳಿಗೂ, ಈ ಪುಸ್ತಿಕೆಗಳ ಪ್ರಕಟನೆಗೂ ನೆರವು ನೀಡುತ್ತಿದ್ದು ಅವರಿಗೆ ವಿಶ್ವವಿದ್ಯಾಲಯವು ತನ್ನ ಕೃತಜ್ಞತೆಗಳನ್ನು ಸೂಚಿಸುತ್ತದೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಎ. ಎಸ್. ಅಡಕೆ
ಉಪಕುಲಪತಿ
ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ
೧—೩—೧೯೬೮

# ಎರಡನೆಯ ಆವೃತ್ತಿಯನ್ನು ಕುರಿತು

ಈ ಪುಟ್ಟ ಹೊತ್ತಿಗೆ ಪುನಃ ಮುದ್ರಣಕ್ಕೆ ಬಂದಿರುವದು ಅದರ ಲೇಖಕನಿಗೆ ಆದರಂತೆಯೇ ಅದನ್ನು ಪ್ರಕಟಿಸಿದವರಿಗೆ ತುಂಬಾ ಸಂತೋಷದ ವಿಷಯವೇ ಸರಿ. ಅಗಸ್ಟು ೧೯೬೫ ರಲ್ಲಿಯೇ ಪ್ರಕಟನ ಶಾಖೆಯ ನಿರ್ದೇಶಕರಾದ ಸಹೃದಯರಾದ ಶ್ರೀ ಕಣವಿಯವರು ಈ ಹೊತ್ತಿಗೆಯನ್ನು ಪುನರ್ಮುದ್ರಣಕ್ಕಾಗಿ ಅಣಿಮಾಡಿಕೊಡಬೇಕೆಂದು ಕೇಳಿಕೊಂಡಿದ್ದರು. ಮೈಸೂರು, ಬೆಂಗಳೂರುಗಳ ಹೊಸ ಜವಾಬ್ದಾರಿಯ ನಿರ್ವಹಣೆಯಲ್ಲಿ ವೇಳೆ ದೊರೆಯದೆ ಆ ಕೆಲಸ ಇಲ್ಲಿಯ ವರೆಗೆ ಮುಂದು ಬಿದ್ದುದಕ್ಕೆ ವಿಷಾದಿಸುತ್ತೇನೆ.

ಹೊತ್ತಿಗೆಯನ್ನು ಆಮೂಲಾಗ್ರವಾಗಿ ಪರಿಷ್ಕರಿಸಲು ಸಾಧ್ಯವಾಗಿಲ್ಲ. ಅಲ್ಲಲ್ಲಿನ ಅಂಕಿ ಸಂಖ್ಯೆಗಳನ್ನು ಬದಲಿಸಲಾಗಿದೆ. ಹೊತ್ತಿಗೆ ಮೊದಲು ಬಾರಿ ಪ್ರಕಟವಾದಂದೀಚೆಗೆ ಆದ ಕೆಲವು ಮಾರ್ಪಾಟುಗಳ ಬಗ್ಗೆ ಉಲ್ಲೇಖ ಮಾಡಲಾಗಿದೆ.

ಈ ಪರಿಷ್ಕರಣ ಕಾರ್ಯದಲ್ಲಿ ಮತ್ತು ಹೊತ್ತಿಗೆಯ ಪುನರ್ಮುದ್ರಣದ ಕಾರ್ಯದಲ್ಲಿ ವಿಶ್ವಾಸದಿಂದ, ಪ್ರೀತಿಯಿಂದ ನೆರವು ನೀಡಿದ ಸನ್ಮಿತ್ರ ಡಾ|| ಶ್ರೀನಿವಾಸ ರಿತ್ತಿ ಅವರಿಗೆ ನನ್ನ ಹಾರ್ದಿಕ ನೆನಕೆಗಳು.

ಅದರಂತೆಯೇ ಮೊದಲನೆಯ ಆವೃತ್ತಿಯನ್ನು ಕೊಂಡು ಓದಿ ಪ್ರೋತ್ಸಾಹಿಸಿದ ಓದುಗರ ಸಂಕುಲಕ್ಕೂ, ವಿಶ್ವವಿದ್ಯಾಲಯದ ಪ್ರಗತಿಪರ, ಧೀಮಂತ ಆಡಳಿತ ವರ್ಗಕ್ಕೂ ಧನ್ಯವಾದಗಳು.

ಪುಸ್ತಿಕೆಯನ್ನು ಅಂದವಾಗಿ ಶೀಘ್ರವಾಗಿ ಅಚ್ಚುಮಾಡಿ ಕೊಟ್ಟ ಶ್ರೀ ಕ್ವಾಲಿಟಿ ಪ್ರಿಂಟರ್ಸ ಅವರಿಗೂ ನನ್ನ ಅಭಿನಂದನೆಗಳು.

ಬೆಂಗಳೂರ ವಿಶ್ವವಿದ್ಯಾಲಯ
ಬೆಂಗಳೂರು
೧೫—೩—೧೯೬೮

**ಕೆ. ಎಸ್. ದೇಶಪಾಂಡೆ**

# ವಿಷಯ ಸೂಚಿಕೆ




| | | |
|---|---|---|
| | ಮಾಲೆಯ ಮುನ್ನುಡಿ | v–vi |
| | ಎರಡನೆಯ ಆವೃತ್ತಿಯನ್ನು ಕುರಿತು | vii–viii |
| ೧. | ಗ್ರಂಥಗಳು–ಅವುಗಳ ಮಹತ್ವ | ೧–೪ |
| ೨. | ಗ್ರಂಥಗಳ ವಿಕಾಸ | ೫–೧೧ |
| ೩. | ಗ್ರಂಥಾಲಯ ಎಂದರೇನು ? | ೧೨–೨೦ |
| ೪. | ಭಾರತದಲ್ಲಿ ಗ್ರಂಥಾಲಯಗಳು | ೨೧–೪೩ |
| ೫. | ಗ್ರಂಥಾಲಯ ಚಳವಳಿ | ೪೪–೬೯ |
| ೬. | ಇಂದು–ಮುಂದು | ೭೦–೧೦೪ |
| | ನೆರವಾದ ಗ್ರಂಥಗಳು, ಬರಹಗಳು | |




# ಭಾರತದಲ್ಲಿ ಗ್ರಂಥಾಲಯ ಪ್ರಸಾರ

---

## ೧ ಗ್ರಂಥಗಳು - ಅವುಗಳ ಮಹತ್ವ

ನೀವೆಲ್ಲ ಮಾತಾಡುವ ಚಕ್ಕೆಯ ಕಥೆಯನ್ನು ಚಿಕ್ಕಂದಿನಲ್ಲಿ ಕೇಳಿರಲಿಕ್ಕೆ ಸಾಕು. ಗ್ರಂಥಗಳ ಕುಲಗೋತ್ರವೂ ಈ ಮಾತಾಡುವ ಚಕ್ಕೆಯ ಕುಲಗೋತ್ರವೂ ಒಂದೇ ಸರಿ. ಆ ಮಾತಾಡುವ ಚಕ್ಕೆ ಒಂದು ವ್ಯಕ್ತಿಗೆ ಮಾತ್ರ ಸಂದೇಶವನ್ನು ಸೂಚಿಸಿದ್ದಾಗಿದ್ದರೆ, ಈ ಗ್ರಂಥಗಳು ಇಡೀ ಮಾನವ ಕುಲಕ್ಕೇ ಸಂದೇಶವನ್ನೋ, ಸ್ಫೂರ್ತಿಯನ್ನೋ, ಸಂತೋಷವನ್ನೋ, ಶತಮಾನಗಳುದ್ದಕ್ಕೂ ಕೊಡುತ್ತ ಬಂದಿವೆ.

ಇಂಥ ಗ್ರಂಥಗಳ ಬರವಣಿಗೆ ಹಾಗೂ ಪ್ರಸಿದ್ಧಿ ಕಾರ್ಯಕ್ಕೆ ಕೊನೆಯೆಂಬುದೇ ಇಲ್ಲ. "ಗ್ರಂಥಗಳಿಲ್ಲದಿದ್ದಲ್ಲಿ ದೇವರೇ ಮೂಕನಾಗಿ ಬಿಡುತ್ತಾನೆ; ನ್ಯಾಯದೇವತೆ ನಿದ್ರಿಸುತ್ತಾಳೆ; ವಿಜ್ಞಾನದೇವತೆ ವಿಶ್ರಾಂತಿ ಪಡೆಯುತ್ತಾಳೆ; ತತ್ವಜ್ಞಾನ ಕುಂಟುತ್ತದೆ; ಸಾಹಿತ್ಯ ಬಾಯಿಗೆ ಬೀಗ ಹಾಕಿಕೊಂಡು ಬಿಡುತ್ತದೆ; ಉಳಿದುದೆಲ್ಲವೂ ಅಂಧಕಾರದಲ್ಲಿ ಅಡಗಿ ಬಿಡುತ್ತದೆ" ಎಂದು ಥಾಮಸ್ ಬಾರ್ಥೋಲಿನ್

ಎಂಬ ಡೆನ್ಮಾರ್ಕ್‌ದೇಶದ ಗ್ರಂಥಪಾಲಕನೊಬ್ಬನು ೧೬೬೨ ರಲ್ಲಿಯೇ ಸಾರಿ ಹೇಳಿದ್ದಾನೆ

ನಿಜವಾಗಿಯೂ ಗ್ರಂಥಗಳು ನಮ್ಮ ನಾಗರಿಕತೆಯ ತಳಹದಿ; ನಮ್ಮ ಸಂಸ್ಕೃತಿಯ ಪ್ರತಿನಿಧಿ; ನಮ್ಮ ಬಾಳಿನ ಬೆಳಕು. ಗ್ರಂಥಗಳ ಸಾಮರ್ಥ್ಯ, ಘನತೆ ಅಷ್ಟಿಷ್ಟಲ್ಲ.

ಕಳಿಂಗ ಕಾಳಗದಲ್ಲಿ ಅಶೋಕನ ಸೈನಿಕರು ಖಡ್ಗಗಳ ಸೆಳೆಮಿಂಚಿನ ತಾಂಡವವಾಡಿದರು. ಇಂದು ನಾವು ಅಶೋಕ ನನ್ನು ಸ್ಮರಿಸುವದಾದರೆ ಆ ಕಳಿಂಗ ಕದನದ ಫಲವಾಗಿ ಭಾರತದಲ್ಲಿ ಕವಿದ ಕಗ್ಗತ್ತಲೆಯ ನೆವದಿಂದಲ್ಲ, ಅವನ ಶಿಲಾಶಾಸನಗಳು ಬೀರುವ ಶಾಂತಿ ಸಂದೇಶಗಳಿಂದಾಗಿ.

ಇಡೀ ವಿಶ್ವದಲ್ಲಿಯೇ ಅತಿ ಪುರಾತನ ಧಾರ್ಮಿಕ ಗ್ರಂಥ ಗಳೆನ್ನಿಸಿಕೊಳ್ಳುವ ವೇದಗಳಿಂದ ನಾವು ಇಂದಿನ ವರೆಗೂ ಸ್ಫೂರ್ತಿಯನ್ನು ಪಡೆಯುತ್ತ ಬಂದಿದ್ದೇವೆ. ರಾಮಾಯಣ, ಮಹಾಭಾರತಗಳು ನಿತ್ಯನೂತನವಾಗಿ ಮೆರೆಯುತ್ತಿವೆ; ನಮ್ಮ ಜನಜೀವನವನ್ನು ಮಾರ್ಪಡಿಸುತ್ತಿವೆ. ವಿಶ್ವವಂದ್ಯ ಕಾಳಿದಾಸನ ಕಾವ್ಯನಾಟಕಗಳನ್ನು ಓದಿ ಸಂತೋಷಪಡದವರಾರು ? ಮಹಾತ್ಮಾ ಗಾಂಧಿಯವರ ಮನಸ್ಸಿನ ಮೇಲೆ ಪ್ರಭಾವ ಬೀರಿದ ಗ್ರಂಥಗಳು ರಸ್ಕಿನ್, ಟಾಲ್‌ಸ್ಟಾಯ್, ರುಸ್ಸೋ ಮುಂತಾ ದವರು ಬರೆದವುಗಳು. ಲೋಕಮಾನ್ಯ ಟಿಳಕ, ಮಹಾತ್ಮಾ ಗಾಂಧೀ, ಇವರುಗಳ ಬರಹಗಳೇ ಭಾರತದಲ್ಲಿ ಬ್ರಿಟಿಶ್ ಸಾಮ್ರಾಜ್ಯದ ಗೋರಿಯನ್ನು ಕಟ್ಟಿದವೆಂದು ಹೇಳಿದರೆ ಅತಿಶ ಯೋಕ್ತಿಯಾಗಲಿಕ್ಕಿಲ್ಲ.

ಹೀಗೆ ತಮ್ಮ ಹೊಟ್ಟೆಯಲ್ಲಿ ಹುದುಗಿದ ವಿಚಾರ ಪ್ರಣಾಲಿಯಿಂದ ಜಗತ್ತಿನ ಇತಿಹಾಸವನ್ನೇ ಬದಲಿಸಿದ ಗ್ರಂಥಗಳ ಸಂಖ್ಯೆ ಬಹಳ. ಇಲ್ಲಿ ಒಂದೆರಡೇ ಉದಾಹರಣೆಗಳನ್ನು ಕೊಡಲಾಗಿದೆ.

ಹ್ಯಾರಿಯಟ್ ಬೀಚರ ಸ್ಟೋ ಎಂಬ ಅಮೇರಿಕೆಯ ಮಹಿಳೆ ಬರೆದ Uncle Tom's Cabin ಎಂಬ ಕಾದಂಬರಿ ಅಮೇರಿಕೆಯಲ್ಲಿ ನಿಗ್ರೋ ಗುಲಾಮರನ್ನು ಬಂಧಮುಕ್ತ ಮಾಡಿತು. ಮಾಲ್ಥಸನು ಬರೆದ Essay on the Principles of Population ಇಂದಿಗೂ ತಮ್ಮ ಜನ ಸಂಖ್ಯೆಯನ್ನು ಇಮ್ಮಡಿ ಮುಮ್ಮಡಿಗೊಳಿಸುತ್ತಿರುವ ಅಖಿಲ ಏಶಿಯನ್ ಜನಾಂಗಕ್ಕೆ ಆಹ್ವಾನವೀಯುತ್ತಿದೆ. ಚಾರ್ಲ್ಸ ಡಾರ್ವಿನ್ನನು ಬರೆದ Origin of Species ನಾವೆಲ್ಲ ಇಂದು ಮಂಗಗಳನ್ನೂ ಮರ್ಯಾದೆಯಿಂದ ಕಾಣುವಂತೆ ಮಾಡಿದೆ. ಆಲ್ಬರ್ಟ ಐನ್‌ಸ್ಟೈನರ Theory of Relativity ಇಂದು ಅಣುಯುಗವನ್ನು ತಂದೊಡ್ಡಿದೆ. ಮಾರ್ಕ್ಸನ The Capital ರಶಿಯದ ಇತಿಹಾಸವನ್ನೇ ಬದಲಿಸಿತು. ಹಿಟ್ಲರನ Mein Kampf ಸುಖಸಮೃದ್ಧಿಗಭಿಮುಖವಾಗಿ ಹೊರಟ ಜಗತ್ತನ್ನು ಭೀಕರ ಕಾಳಗದಲ್ಲಿ ನೂಕಿತು. ಇಂತು ಗ್ರಂಥಗಳು ವಿಚಾರ ಕ್ರಾಂತಿಯನ್ನೇ ಹೂಡಬಲ್ಲವು. ಜೀವನದ ಪ್ರವಾಹವನ್ನೇ ತಡೆಗಟ್ಟಿ ಅದು ಬೇರೆ ದಿಸೆಯಲ್ಲಿ ಪ್ರವಹಿಸು-ವಂತೆ ಮಾಡಬಲ್ಲವು. ಸಾಮ್ರಾಜ್ಯಗಳನ್ನು ಕಟ್ಟಲೂ ಬಲ್ಲವು; ಅವುಗಳನ್ನು ಕೆಡವಲೂ ಬಲ್ಲವು.

ಇಂಥ ಪ್ರಭಾವೀ ಗ್ರಂಥಗಳು ಅಚ್ಚಾದ ಹಾಗೂ ಪ್ರಸಾರವಾದ ಬಗೆ, ಇವುಗಳನ್ನು ಕುರಿತು ವಿವರವಾಗಿ ಹೇಳುವದು ಸೂಕ್ತ ಕಂಡೀತು ಉದಾಹರಣೆಗೆಂದು ಹ್ಯಾರಿಯಟ್ ಬೀಚರ ಸ್ಟೋ ಅವರ 'ಟಾಮುಕಕ್ಕನ ಗುಡಿಸಲು' Uncle Tom's Cabin ಇದನ್ನೇ ತೆಗೆದುಕೊಳ್ಳೋಣ. ನವಯುಗದ ಗ್ರಂಥ ಪ್ರಕಾಶನದ ಇತಿಹಾಸದಲ್ಲೇ ಈ ಗ್ರಂಥ ಅದ್ಭುತಗಳನ್ನು ಸಾಧಿಸಿಬಿಟ್ಟಿದೆ. ಈ ಕಾದಂಬರಿಯ ಮಾರಾಟದ ವಿಕ್ರಮವನ್ನು ಮುರಿದ ಮತ್ತೊಂದು ಗ್ರಂಥವೆಂದರೆ ಬೈಬಲ್ಲೊಂದೇ ಎಂದು ಹೇಳಲಾಗುತ್ತಿದೆ. ಕಾದಂಬರಿ ಪ್ರಸಿದ್ಧವಾದ ದಿನ ಮೂರು ಸಾವಿರ ಪ್ರತಿಗಳು ಮಾರಾಟವಾದವು. ಒಂದು ವರ್ಷ ಸವೆಯುವಷ್ಟರಲ್ಲಿ ಕೇವಲ ಅಮೇರಿಕೆಯಲ್ಲಿ ೩ ಲಕ್ಷ ಪ್ರತಿಗಳು ಮಾರಾಟವಾದವು. ಕಾದಂಬರಿಯ ಪ್ರತಿಗಳನ್ನು ಪ್ರಕಾಶಕರಿಗೆ ಮಾರಾಟಕ್ಕಾಗಿ ವೇಳೆಗೆ ಸರಿಯಾಗಿ ಒದಗಿಸುವದಕ್ಕೋಸ್ಕರ ಎಂಟು ಮುದ್ರಣಾಲಯಗಳೂ, ಹಾಗೂ ಮೂರು ಕಾಗದ ಕಾರಖಾನೆಗಳು ಹಗಲಿರುಳೆನ್ನದೆ ದುಡಿದರೂ ಸಾವಿರಾರು ಬೇಡಿಕೆಗಳಿಗೆ ಪ್ರಕಾಶಕರು ನಿರಾಶಾದಾಯಕ ಉತ್ತರ ಕೊಡಬೇಕಾಯಿತಂತೆ. ಇಂಗ್ಲಂಡದಲ್ಲಿ ಅನೇಕ ಪ್ರಕಾಶಕರು ಈ ಕಾದಂಬರಿಯ ಬೇರೆ ಬೇರೆ ಆವೃತ್ತಿಗಳನ್ನು ಹೊರಡಿಸಿ ಒಂದೇ ಒಂದು ವರ್ಷದಲ್ಲಿ ೧೫ ಲಕ್ಷ ಪ್ರತಿಗಳನ್ನು ಮಾರಿದರಂತೆ!

## ೨ ಗ್ರಂಥಗಳ ವಿಕಾಸ

ಹೀಗೆ ಅನಾದಿ ಕಾಲದಿಂದ ವಿಶ್ವದ ಭವಿಷ್ಯತ್ತನ್ನು ರೂಪಿಸುತ್ತ ಬಂದಿರುವ ಈ ಗ್ರಂಥಬ್ರಹ್ಮ ಶತಮಾನಗಳುದ್ದಕ್ಕೂ ತಳೆದ ಬೇರೆ ಬೇರೆ ವೈವಿಧ್ಯಪೂರ್ಣ ರೂಪಗಳಲ್ಲಿ ನಾವೀನ್ಯವಿದೆ, ವಿಕಾಸಭಾವವಿದೆ. ಈ ರೂಪಾವತಾರಗಳ ಕತೆ ತುಂಬ ಸ್ವಾರಸ್ಯಮಯವಾಗಿದೆ. ಇಟ್ಟಂಗಿ ರೂಪದಿಂದ ನಾವೀಗ ಪ್ರತಿನಿತ್ಯ ಉಪಯೋಗಿಸುವ ಪುಸ್ತಕ ರೂಪದವರೆಗೂ ಅನೇಕ ಸ್ಥಿತ್ಯಂತರಗಳಾಗಿ ಹೋಗಿವೆ.

ಮಾನವ ಕುಲಕ್ಕೆ ೧೦ ಲಕ್ಷ ವರ್ಷ ವಯಸ್ಸಾಗಿರಬಹುದೆಂದು ವಿಜ್ಞಾನಿಗಳು ಹೇಳುತ್ತಾರೆ. ಆದರೆ ಮಾನವ ಮಾತನಾಡಲು ಕಲಿತು ಕೇವಲ ೧ ಲಕ್ಷ ವರ್ಷಗಳು ಮಾತ್ರ ಆಗಿವೆ. ಅದರಲ್ಲೂ ಬರಹದ ಕಲೆಯನ್ನು ಅವನು ಅರಿತದ್ದು ೧೦ ಸಾವಿರ ವರ್ಷಗಳ ಹಿಂದೆ ಮಾತ್ರ. ಒಕ್ಕಲುತನವನ್ನರಿಯದ ಆದಿ ಮಾನವ ಬೇಟೆಯಾಡಿ ಉಪಜೀವಿಸುತ್ತಿದ್ದ. ಒಂದಾನೊಂದು ಪ್ರಸಂಗದಲ್ಲಿ ತನ್ನ ಆತ್ಮೀಯರಿಂದ ದೂರ ಮಾಡಲ್ಪಟ್ಟ ಅವನು ತಾನೊಂದು ರುಚಿಕರ ಮಾಂಸವುಳ್ಳ ಮೃಗದ ಬೇಟೆಯಾಡಿದೆನೆಂದು ಅವರಿಗೆ ತಿಳಿಸುವ ಕುತೂಹಲದಿಂದ ಬರಹ ಬರದವನಾಗಿ ಬೇಟೆಯ ಚಿತ್ರವನ್ನೇ ತಾನಿರುವ

ಗುಹೆಯ ಗೋಡೆಗಳ ಮೇಲೆ ೫೦ ಸಾವಿರ ವರುಷಗಳ ಹಿಂದೆ ಚಿತ್ರಿಸಿದ. ಅಂದೇ ಬರಹ ಭೂಮಿಯಲ್ಲಿ ಮೂಡಿ-ದಂತಾಯಿತು. ಶೀಘ್ರದಲ್ಲಿಯೇ ಈ ಚಿತ್ರಗಳು ಅಕ್ಷರಗಳಾಗಿ ಮಾರ್ಪಾಡಾದವು. ಬರಹದ ಕಲೆಯನ್ನು ವಶಪಡಿಸಿಕೊಂಡ ಮಾನವ ತಾನು ತನ್ನ ಜೀವಮಾನದಲ್ಲಿ ಸಂಪಾದಿಸಿದ ಜ್ಞಾನ ಭಾಂಡಾರವನ್ನು ತನ್ನ ಪೀಳಿಗೆಯ ಉಪಯೋಗಕ್ಕಾಗಿ ಗ್ರಂಥಗಳ ರೂಪದಲ್ಲಿ ಸಂಗ್ರಹಿಸಿ ಕಾಯ್ದಿಡಲು ಕಾತುರ-ಗೊಂಡ. ಇದರ ಪರಿಣಾಮವಾಗಿ ಗ್ರಂಥಗಳ ಉತ್ಪತ್ತಿ-ಯಾಯಿತು. ಅಂತೆಯೇ ಮುಂದೆ ಗ್ರಂಥಸಂಗ್ರಹಗಳೂ ಮೂಡಿಬಂದವು.

ಪುಸ್ತಕದ ಅತಿ ಮೊಟ್ಟಮೊದಲಿನ ರೂಪವೆಂದರೆ ಕಲ್ಲು. ಈ ರೂಪದ ಪುಸ್ತಕಗಳು ನಮ್ಮ ದೇಶದ ಮೂಲೆಮೂಲೆ ಯಲ್ಲಿ ಕಂಡುಬರುತ್ತವೆ. ಕ್ರಿ. ಪೂ. ೩ ನೆಯ ಶತಮಾನದ ಅಶೋಕನ ಶಿಲಾಶಾಸನಗಳೇ ಈ ರೂಪದ ಮಹತ್ವಪೂರ್ಣ ಪ್ರತಿನಿಧಿಗಳೆಂದು ಹೇಳಬಹುದು

ಬೆಬಿಲೋನಿಯ ಮತ್ತು ಆಸ್ಸೀರಿಯಾ ದೇಶಗಳಲ್ಲಿ ಕ್ರಿ. ಶ. ೨೦೦೦ ವರ್ಷಗಳ ಹಿಂದೆ ಇಟ್ಟಂಗಿ ರೂಪದಲ್ಲಿ ಪುಸ್ತಕಗಳಿರುತ್ತಿದ್ದವೆಂದು ಹೇಳಿದರೆ ಸೋಜಿಗವೆನಿಸೀತು. ಇಂಥ ಇಟ್ಟಂಗಿಗಳ ವರ್ಗೀಕೃತ ಪೀಪಾಯಿಗಳು ಅಲ್ಲಿ ಇತ್ತೀಚೆಗೆ ದೊರೆತಿವೆ. ಇಂಥ ಪ್ರತಿಯೊಂದು ಪೀಪಾಯಿಗೂ ಅದರಲ್ಲಿ ಇರುವ ಗ್ರಂಥದ ಲೇಖಕನ ಹೆಸರು ಮುಂತಾದವು-

ಗಳನ್ನು ಸೂಚಿಸುವ ಸೂಚಿಪತ್ರವನ್ನು ಅಂಟಿಸಲಾಗಿದೆ.

ಚೀನಾ ದೇಶದಲ್ಲಿ ಗ್ರಂಥಗಳನ್ನು ಕ್ರಿ. ಪೂ. ೧೪ ನೆಯ ಶತಮಾನದಲ್ಲಿ ಎಲುಬುಗಳ ಮೇಲೆ ಬರೆಯುತ್ತಿದ್ದರಂತೆ. ಆನ್‌ಯಾಂಗ ಎಂಬಲ್ಲಿ ದೊರೆತ ಇಂಥ ಎಲುಬುಗಳಿಗೆ Oracle bones ಎಂದು ಹೇಳುತ್ತಾರೆ.

ಶತಮಾನಗಳುರುಳಿದಂತೆ ಮಾನವ ತನ್ನ ಬರಹಕ್ಕಾಗಿ ಚರ್ಮ, ಹುಲ್ಲು, ತೊಗಟೆ, ತಾಮ್ರಪಟ, ತಾಡವೋಲೆ, ಭೂರ್ಜಪತ್ರ, ಅರಿವೆ, ರೇಶಿಮೆಬಟ್ಟೆ, ಬಿದಿರು, ಫಲಕ, ಕಬ್ಬಿಣ, ಹಿತ್ತಾಳೆ, ಬೆಳ್ಳಿ ಬಂಗಾರಗಳ ಪಟ, ಹಸ್ತಿದಂತ ಮುಂತಾದವುಗಳನ್ನು ಆಣಿ ಮಾಡಿಕೊಂಡು ಉಪಯೋಗಿಸಿದ. ಈ ಎಲ್ಲ ತರಹದ ಪುಸ್ತಕಗಳು ಜಗತ್ತಿನ ವಸ್ತು ಸಂಗ್ರಹಾಲಯಗಳಲ್ಲಿ, ಪ್ರಸಿದ್ಧ ಗ್ರಂಥ ಭಾಂಡಾರಗಳಲ್ಲಿ ಇಂದಿಗೂ ನೋಡಲು ದೊರೆಯುತ್ತವೆ.

ಕಾಗದ ತಯಾರಿಕೆಯ ಹಾಗೂ ಮುದ್ರಣ ಕಲೆಯನ್ನು ತಿಳಿಯುವ ವರೆಗೂ ಮಾನವ ಮೇಲೆ ಹೇಳಿದ ವಸ್ತುಗಳನ್ನು ಬರೆಯಲು ಉಪಯೋಗಿಸುತ್ತಿದ್ದ. ನಮ್ಮ ದೇಶದಲ್ಲಿ ಕ್ರಿ. ಪೂ. ೩ ನೆಯ ಶತಮಾನದಲ್ಲಿ ಹತ್ತಿಯಿಂದ ಕಾಗದ ತಯಾರಿಸುತ್ತಿದ್ದರೆಂದು ಹೇಳಲಾಗುತ್ತಿದೆ. ಈ ನಂಬಿಕೆಗೆ ಇನ್ನೂ ಧೃಡವಾದ ಆಧಾರ ದೊರೆತಿಲ್ಲ. ಕ್ರಿ. ಶ. ೧೩ ನೆಯ ಶತಮಾನದಲ್ಲಿ ಮಾತ್ರ ಕಾಗದ ಭಾರತದಲ್ಲಿ ತಯಾರಾಗು

ತ್ರಿತ್ತು. ಕಾಗದ ಮಾಡುವ ಹಾಗೂ ಮುದ್ರಣ ಕಲೆಯನ್ನು ವಿಶ್ವಕ್ಕೆ ಮೊಟ್ಟಮೊದಲಿಗೆ ಪರಿಚಯ ಮಾಡಿಕೊಟ್ಟ ಶ್ರೇಯಸ್ಸು ಚೀನಾ ದೇಶಕ್ಕೆ ಸಲ್ಲುತ್ತದೆ. ಚೀನಿಯರು ಕ್ರಿ. ಶ. ೧೦೫ ರಲ್ಲಿ ಕಾಗದವನ್ನು ಮೊಟ್ಟ ಮೊದಲು ತಯಾರಿಸಿದರು. ಕ್ರಿ. ಶ. ೩೮೨ ರಲ್ಲಿ ಅವರು ವಿಶ್ವದಲ್ಲಿಯೇ ಪ್ರಪ್ರಥಮವಾದ ವರ್ತಮಾನ ಪತ್ರವನ್ನು ಮುದ್ರಿಸಿದರು. ಮುದ್ರಣ ಹಾಗೂ ಕಾಗದ ಮಾಡುವ ಕಲೆಯನ್ನು ಅರಿತುಕೊಳ್ಳಬೇಕಾದರೆ ಪಾಶ್ಚಾತ್ಯರಿಗೆ ನೂರಾರು ವರ್ಷಗಳು ಬೇಕಾದವು. ಜರ್ಮನಿಯ ಗುಟ್ಟೆನ್‌ಬರ್ಗ ಎಂಬವನು ಮೊಟ್ಟಮೊದಲಿಗೆ ಮುದ್ರಣ ಕಲೆಯನ್ನು ೧೫ ನೆಯ ಶತಮಾನದಲ್ಲಿ ಪಾಶ್ಚಾತ್ಯರಿಗೆ ಪರಿಚಯ ಮಾಡಿಕೊಟ್ಟನು. ಮುದ್ರಣ ಕಲೆ ನಮ್ಮ ದೇಶಕ್ಕೆ ಬಂದುದು ೧೫೫೬ ರಲ್ಲಿ.

ಇಂತು ಗ್ರಂಥಗಳ ಬೆಳವಣಿಗೆ ಕಲ್ಲಿನ ರೂಪದಿಂದ ಮಾರ್ಪಟ್ಟು ನಾವು ಪ್ರತಿನಿತ್ಯ ಉಪಯೋಗಿಸುವ ಪುಸ್ತಕ ರೂಪಕ್ಕೆ ಮುಟ್ಟಬೇಕಾದರೆ ಸಹಸ್ರಾರು ಶತಮಾನಗಳು ಕಳೆದುಹೋಗಿವೆ. ಇಂದು ಪುಸ್ತಕ ಇನ್ನೂ ಹೊಸ ಹೊಸ ರೂಪ ತಳೆಯುವದರಲ್ಲಿಯೇ ಇದೆ.

ಇದೇ ಶತಮಾನದ ಮೊದಲಿನ ೫೦ ವರ್ಷಗಳಲ್ಲಿ ಎರಡು ಮಹಾಯುದ್ಧಗಳು ಜರುಗಿ ಹೋದವು. ಈ ಯುದ್ಧಗಳ ಬಿಸಿ ಗ್ರಂಥಗಳಿಗೆ ತಟ್ಟದೆ ಇರಲಿಲ್ಲ. ಪಾಶ್ಚಾತ್ಯ ರಾಷ್ಟ್ರಗಳ ಅನೇಕ ಗ್ರಂಥಾಲಯಗಳಲ್ಲಿಯ ಲಕ್ಷಾಂತರ ಗ್ರಂಥಗಳು



ಲೈಬ್ರರಿ ಆಫ್ ಕಾಂಗ್ರೆಸ್, ವಾಶಿಂಗ್ಟನ್

Courtesy
Wheat Loan Office, New Delhi



ಲೈಬ್ರರಿ ಆಫ್ ಕಾಂಗ್ರೆಸ್ (ಒಳನೋಟ)

Courtesy
Wheat Loan Office, New Delhi

ಈ ಎರಡು ವಿಶ್ವಯುದ್ಧಗಳಲ್ಲಿ ಬಾಂಬಿನ ಬೆಂಕಿಗೆ ಆಹುತಿಯಾದವು. ಈ ವಿಪತ್ತಿನಿಂದಾಗಿ ಗ್ರಂಥ, ಆತ್ಮರಕ್ಷಣೆಗಾಗಿ ಇನ್ನೊಂದು ಹೊಸರೂಪ ತಳೆಯಿತು. ಆ ರೂಪವೆಂದರೆ Micro Film, Micro Fiche ಹಾಗೂ Micro Card. ಈ ವಾಮನ ರೂಪದಲ್ಲಿ ಕೋಟಿಗಟ್ಟಲೆ ಪುಸ್ತಕಗಳನ್ನು ಒಂದೆರಡು ದೊಡ್ಡ ಬೀರುಗಳಲ್ಲಿ ಹಾಕಿ ನಿರ್ಜನವಾದ ಆರಣ್ಯದಲ್ಲಿ, ಬಾಂಬು, ಬೆಂಕಿ, ಮಳೆಗಳಿಂದ ಅಡಗಿಸಿ ಸುರಕ್ಷಿತವಾಗಿಡಲು ಈಗ ಸಾಧ್ಯವಾಗಿದೆ.

ಅಮೇರಿಕೆಯ ವಾರ್ತಾ ಸಂಸ್ಥೆಯ ಡೈರೆಕ್ಟರರಾಗಿದ್ದ ಆರ್ಥರ ಲಾರ್ ಸನ್‌ರು ಪುಸ್ತಕಗಳ ಭವಿಷ್ಯತ್ತಿನ ಬಗ್ಗೆ ಬರೆದ ಈ ಕೆಳಗಿನ ಸ್ವಾರಸ್ಯಮಯವಾದ ಉಲ್ಲೇಖನವನ್ನು ಈ ಸಂದರ್ಭದಲ್ಲಿ ನೆನಪಿಗೆ ತಂದುಕೊಳ್ಳಬಹುದಾಗಿದೆ.

"ಅತ್ಯಾಶ್ಚರ್ಯಕರವಾದ ವೈಜ್ಞಾನಿಕ ಯುಗ ಪ್ರಾರಂಭವಾದಂದಿನಿಂದ ಕಥೆ ಕಾದಂಬರಿಗಳನ್ನು ಓದಿ ಮನರಂಜನೆ ಮಾಡಿಕೊಳ್ಳುವ ಬದಲು ನಾವು ಸುಖವಾಗಿ, ವಿರಾಮ ಕುರ್ಚಿಯಲ್ಲಿ ಒರಗಿ, ಕಣ್ಣು ಮುಚ್ಚಿ, ಕಥೆಗಳನ್ನೋ, ಸುದ್ದಿಗಳನ್ನೋ, ಸಂಗೀತವನ್ನೋ, ಆಕಾಶವಾಣಿಯ ಮೂಲಕ ಆಲಿಸಬಹುದಾಗಿತ್ತು. ಇದೀಗ ಇದಕ್ಕಿಂತ ಸ್ವಲ್ಪ ಹೆಚ್ಚಿನ ಶ್ರಮವಹಿಸಿ, ಕಣ್ಣು ತೆರೆದು, ನೀಟಾಗಿ ಕುಳಿತು, ಟೆಲಿವಿಜನ್ ಮೂಲಕ ನಾವು ಕಥೆಗಳನ್ನು ಕೇಳಲೂ ಬಹುದು; ನೋಡಲೂ ಬಹುದು. ಅಂದ ಮೇಲೆ ನಾವೆಲ್ಲ ಪುಸ್ತಕಗಳನ್ನು ಓದುವ

ಶ್ರಮವನ್ನೇಕೆ ವಹಿಸಬೇಕು? ಅಥವಾ ಪುಸ್ತಕಗಳನ್ನು ಕೊಂಡುಕೊಳ್ಳುವ ಗೋಜಿಗೆ ಏಕೆ ಹೋಗಬೇಕು? ಅಷ್ಟೇ ಏಕೆ, ಪುಸ್ತಕಗಳನ್ನು ಬರೆಯುವ ಹವ್ಯಾಸವನ್ನೇಕೆ ಹಚ್ಚಿ-ಕೊಳ್ಳಬೇಕು?"

ಜಾರ್ಜ ಸ್ಟೀವರ್ಟ ಎಂಬ ಇನ್ನೊಬ್ಬ ಪಾಶ್ಚಾತ್ಯನು ಪ್ರತಿಯೊಂದು ಮನೆಯಲ್ಲಿ ಪುಸ್ತಕಗಳ ಬದಲು ಪ್ರೊಜೆಕ್ಟರು-ಗಳು ಬರಬಹುದೆಂದು ವಾದಿಸುತ್ತಾನೆ. ಇವನ ವಾದಸರ-ಣಿಯ ಪ್ರಕಾರ ಈ ಪ್ರೊಜೆಕ್ಟರುಗಳ ಯುಗದಲ್ಲಿ ಎಲ್ಲ ಓದು ಮೈಕ್ರೋ ಫಿಲ್ಮುಗಳ ಮೂಲಕವೇ ಆಗುವದು. ಗೋಡೆಯ ಮೇಲೆ ಬಿದ್ದ ಈ ಫಿಲ್ಮುಗಳ ಛಾಯೆಯಲ್ಲಿ ಅಕ್ಷರಗಳು, ಶಬ್ದಗಳು, ಸಹಜವಾದ, ಅರ್ಥಪೂರ್ಣವಾದ ಗುಂಪುಗಳಲ್ಲಿ ಕುಣಿದು ಮಾಯವಾಗುತ್ತವೆ. ಮಲಗಿಕೊಂಡವರ ಸಲು-ವಾಗಿ ಫಿಲ್ಮುಗಳ ಛಾಯೆಯನ್ನು ಛಂತಿಯ ಮೇಲೂ ಮೂಡಿಸಬಹುದು. ಅಥವಾ ಇದೆಲ್ಲವನ್ನೂ ಮೀರಿ ಇನ್ನೂ ಮುಂದಕ್ಕೆ ಸಾಗಿ, ಪುಸ್ತಕಗಳನ್ನು ಟೇಪು ರೆಕಾರ್ಡುಗಳ ಮೂಲಕವೋ ಅಥವಾ ಸೌಂಡ ಟ್ರ್ಯಾಕ್ಟ ಮೂಲಕವೋ ಸುಶ್ರಾವ್ಯವಾದ, ಮಂಜುಳವಾದ ಮೆಲ್ಲುಲಿಯಲ್ಲಿ ನುಡಿಸ-ಬಹುದು. ಮತ್ತು ಇಂಥ ಉಪಕರಣಗಳು ಓದುಗನ ಅಥವಾ ಶ್ರೋತೃವಿನ ಹೃದಯದ ಮಿಡಿತದಲ್ಲಿನ ಅಥವಾ ಅವನ ಶ್ವಾಸೋಚ್ಛ್ವಾಸದ ವೇಗದಲ್ಲಿನ ಬದಲಾವಣೆಗಳಿಂದ ಅವನು ನಿದ್ರೆ ಹೋದುದನ್ನು ತಿಳಿದುಕೊಂಡು "ಪುಸ್ತಕ

ಓದನ್ನು" ಸ್ವಯಂಸ್ಫೂರ್ತಿಯಿಂದ ನಿಲ್ಲಿಸುವಂತೆ ಮಾಡಲೂ ಬಹುದು !

ಅದೇನೇ ಇರಲಿ, ನಾವು ಈಗ ದಿನವೂ ಉಪಯೋಗಿ-ಸುತ್ತಿರುವ ಈ ಗ್ರಂಥ ಉಳಿಯಲು ಬಂದಿದೆ, ಅಳಿಯಲಿಕ್ಕಲ್ಲ. Micro Film ಬರಲಿ, Micro Card ಬರಲಿ, ಅಥವಾ ಟೆಲಿವಿಜನ್ ಬರಲಿ, ಟೇಪ ರೆಕಾರ್ಡ ಬರಲಿ, ಈ ಗ್ರಂಥ ಮಾತ್ರ ಚಿರಂಜೀವಿ.

---

# ೩ ಗ್ರಂಥಾಲಯ ಎಂದರೇನು?

ಇಲ್ಲಿಯವರೆಗೆ ಗ್ರಂಥದ ಬೇರೆ ಬೇರೆ ರೂಪಗಳನ್ನು ಬಣ್ಣಿಸಿಯಾಯ್ತು. ಇನ್ನು ಗ್ರಂಥಗಳ ಸಂಗ್ರಹಗಳ ಬಗ್ಗೆ, ಅಂದರೆ ಗ್ರಂಥಾಲಯಗಳ ಬಗ್ಗೆ ಒಂದಿಷ್ಟು ವಿವರವಾಗಿ ಹೇಳುವದು ಅತ್ಯವಶ್ಯ.

ಗ್ರಂಥಾಲಯಗಳೆಂದರೇನು ? ಅವುಗಳ ಬಗ್ಗೆ ನಮ್ಮ ಕಲ್ಪನೆ ಏನು? ಮೊನ್ನೆ ಮೊನ್ನೆಯ ವರೆಗೆ ಗ್ರಂಥಾಲಯಗಳ ಬಗ್ಗೆ ಇದ್ದ ನಮ್ಮ ಕಲ್ಪನೆ ಹಾಸ್ಯಾಸ್ಪದವಾಗಿತ್ತು. ಗ್ರಂಥಾಲಯವೆಂದರೆ ಯಾವದೇ ಕಚೇರಿ, ಶಾಲೆ, ಅಂಗಡಿ ಇಂಥವುಗಳಿಗೆ ಉಪಯೋಗ ಬೀಳದ, ಹಳೆಯ ಕಾಲದ, ಬೀಳಲಿಕ್ಕಾಗಿರುವ, ವರ್ಷಾನುವರ್ಷ ಸುಣ್ಣ ಬಣ್ಣ ಕಾಣದ, ದೊಡ್ಡ ಮಳೆಯ ಪ್ರಸಂಗದಲ್ಲಿ ಸಣ್ಣ ಕೆರೆಯಾಗುವ, ಗಾಳಿ ಬೆಳಕುಗಳ ಅಭಾವವಿರುವ, ಜೀರ್ಣ ಮಂದಿರವೆಂದೂ, ಅಲ್ಲಿರುವ ಗ್ರಂಥಗಳೆಂದರೆ ಧೂಳಿನಲ್ಲಿ ಮುಳುಗಿದವುಗಳೆಂದೂ, ಅವುಗಳಿಂದ ಸಾಮಾನ್ಯ ಜನರಿಗೆ ಹೆಚ್ಚಿನ ಪ್ರಯೋಜನವಿಲ್ಲವೆಂದೂ, ಅಲ್ಲಿರುವ ಗ್ರಂಥಪಾಲನೆಂದರೆ ಯಾವದೇ ಕೆಲಸವನ್ನು ಸಮರ್ಥವಾಗಿ ಸಾಗಿಸಿಕೊಂಡು ಹೋಗಲಾಗದ ಜೀವನ್ಮೃತ ಬಡಸಾಯಿಯೆಂದೂ ನಮ್ಮವರ ಕಲ್ಪನೆ ಇದ್ದಿರಲಿಕ್ಕೆ ಸಾಕು.

ಅಂಥ ಗ್ರಂಥಾಲಯುಗಳ ನೆನಪು ನಮಗೆ ವರ್ಷಕ್ಕೊಮ್ಮೆ ಅದರ ಹುಟ್ಟು ಹಬ್ಬವನ್ನು ಆಚರಿಸುವಾಗ್ಗೆ ಮಾತ್ರ. ಉಳಿದ ವೇಳೆಗೆ ನಾವು ಅದರ ಬಗ್ಗೆ ಚಿಂತನ ಮಾಡಿದವರಲ್ಲ, ಅದರ ಬಳಿ ಸುಳಿದಾಡಿದವರಲ್ಲ, ಅದರ ಉಪಯುಕ್ತತೆಯನ್ನರಿತವರಲ್ಲ.

ಹಾಗಾದರೆ ನಿಜವಾದ, ಆದರ್ಶವಾದ, ಸಜೀವವಾದ, ಸಮೃದ್ಧವಾದ ಗ್ರಂಥಾಲಯ ಹೇಗಿರುತ್ತದೆ? ಅಮೇರಿಕೆ ಗ್ರಂಥಾಲಯುಗಳ ಆಗರವೆಂದೂ, ವಾಚನಾಲಯುಗಳ ತವರೆಂದೂ ಖ್ಯಾತಿವೆತ್ತಿದೆ. ಅಲ್ಲಿನ ಜನ ಗ್ರಂಥಾಲಯುಗಳಿಗೆ ಸಮಾಜದಲ್ಲಿ ಅದೆಷ್ಟು ಮಹತ್ವದ ಸ್ಥಾನವನ್ನು ಕೊಟ್ಟಿದ್ದಾರೆ ಮತ್ತು ಅವುಗಳ ಬಗ್ಗೆ ಅವರ ಕಲ್ಪನೆ ಏನೆಂಬುದನ್ನು ಅರಿತುಕೊಂಡರೆ ನಮಗೆ ಗ್ರಂಥಾಲಯುಗಳ ನಿಜವಾದ ಕಲ್ಪನೆಯಾದೀತು.

ಅಮೇರಿಕೆಯಲ್ಲಿ ಸಾಮಾನ್ಯ ಮನುಷ್ಯನೊಬ್ಬನಿಗೆ ಗ್ರಂಥಾಲಯವೆಂದರೆ ಸಿರಿವಂತಿಕೆಯ ವಸ್ತುವಲ್ಲ; ಅದು ಅವನ ನಿತ್ಯ ಜೀವನಕ್ಕೆ ಬೇಕಾಗಿರುವ ಆವಶ್ಯಕತೆ. ಅದು ಪ್ರತಿಯೊಂದು ಹಳ್ಳಿಯ, ಪಟ್ಟಣದ, ಸಮಾಜದ, ಜೀವಾಳ. ಅಂಚೆ-ತಂತಿ ಕಚೇರಿ, ಮುನಿಸಿಪಾಲಿಟಿ, ಶಾಲೆ-ಕಾಲೇಜು, ಆಸ್ಪತ್ರೆ, ನಿತ್ಯಜೀವನಕ್ಕೆ ಎಷ್ಟು ಅವಶ್ಯವೋ ಅದಕ್ಕಿಂತ ಹೆಚ್ಚು ಅವಶ್ಯವಾಗಿರುವ ಒಂದು ಸಂಸ್ಥೆ. ಪ್ರಜಾಪ್ರಭುತ್ವದ ಅಸ್ತಿತ್ವಕ್ಕೆ, ಯಶಸ್ಸಿಗೆ ಅದು ಆಧಾರಸ್ತಂಭ. ಅಂತೆಯೇ

ಅಮೇರಿಕೆಯ ಶ್ರೀಮಂತ ಜನ ಉದಾರವಾಗಿ ಗ್ರಂಥಾಲಯ ಗಳಿಗೆ ಧನ ನೀಡುತ್ತಾರೆ. ಆಂಡ್ರ್ಯೂ ಕಾರ್ನೇಗಿ ಎಂಬವನೊಬ್ಬನೇ ೧೮೯೮ ರಿಂದ ೧೯೧೭ ರ ವರೆಗೆ ೧೬೭೯ ಗ್ರಂಥಾಲಯಗಳ ಸ್ಥಾಪನೆಗೆಂದು ೪ ಕೋಟಿಗೂ ಮಿಕ್ಕಿ ಡಾಲರುಗಳನ್ನು ದಾನ ಮಾಡಿದ.

ಅಲ್ಲಿನ ಪ್ರತಿಯೊಂದು ಗ್ರಂಥಾಲಯ ಭವ್ಯವಾದ, ಅತ್ಯಾಧುನಿಕ ಸೌಕರ್ಯಗಳಿಂದೊಡಗೂಡಿದ ಭವನದಲ್ಲಿ, ಪಟ್ಟಣದ ಅತಿ ಮಹತ್ವದ ಸ್ಥಳದಲ್ಲಿ ಮೆರೆಯುತ್ತಿದೆ. ಗ್ರಂಥಪಾಲನಿಗಾದರೂ ಯೋಗ್ಯ ಮಾನ ಮರ್ಯಾದೆಗಳು ದೊರೆಯುತ್ತವೆ. ಪಟ್ಟಣಗಳಲ್ಲಿ ಗ್ರಂಥಪಾಲರಿಗೆ ಆ ಪಟ್ಟಣ ದಲ್ಲಿ ಯಾವದೇ ಒಬ್ಬ ಹಿರಿಯ ಅಧಿಕಾರಿಗೆ ಸಲ್ಲುತ್ತಿರುವ ಸಂಬಳ, ಸ್ಥಾನ ಮಾನಗಳು ದೊರೆಯುತ್ತಿದ್ದರೆ, ಕಾಲೇಜು, ವಿಶ್ವವಿದ್ಯಾಲಯಗಳಲ್ಲಿಯ ಗ್ರಂಥಪಾಲರಿಗೆ ವಿವಿಧ ಶಾಖೆಗಳ ಮುಖ್ಯ ಪ್ರಾಧ್ಯಾಪಕರಿಗೆ ದೊರೆಯುತ್ತಿರುವ ಸ್ಥಾನ ಮಾನ ಸಲ್ಲುತ್ತವೆ. ಗ್ರಂಥಾಲಯಗಳಲ್ಲಿಯ ವ್ಯವಸ್ಥೆ, ಅಂದ-ಚೆಂದ, ಶಾಂತ-ಸುಂದರ ವಾತಾವರಣ ಬೀದಿಯಲ್ಲಿ ಹೋಗುವವರನ್ನು ಆಕರ್ಷಿಸಿ ಅವರು ಒಳಗೆ ಪ್ರವೇಶ ಮಾಡುವಂತೆ ಮೋಹಕ-ವಾಗಿರುತ್ತವೆ. ವಿದ್ವಜ್ಜನರಿಗೆ ಅವು ಆದರ್ಶ ಸರಸ್ವತೀ ಸದನಗಳಾಗಿವೆ. ಜನರ ಮನರಂಜನೆ ಮಾಡುವವರ ಜೊತೆಗೆ ಪ್ರಪಂಚದಲ್ಲಿಯ ಪ್ರತಿಯೊಂದು ವಿಷಯದ ಬಗ್ಗೆ ಅತಿ ನೂತನವಾದ ವಿಷಯವನ್ನು ಸಂಗ್ರಹಿಸಿ ಕೊಡುತ್ತವೆ.

ಯಾವದೇ ವಿಷಯದ ಬಗ್ಗೆ ಆಳವಾದ ಅಭ್ಯಾಸವನ್ನು ಕೈಕೊಳ್ಳಲು ಪ್ರಚೋದಿಸುತ್ತವೆ. ಶಾಲೆ ಕಾಲೇಜುಗಳಿಗೆ ಹೋಗಲಸಾಧ್ಯವಾದವರಿಗೆ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಲು ಅನುಕೂಲತೆಗಳನ್ನು ಒದಗಿಸಿಕೊಡುತ್ತವೆ. ಮನರಂಜನೆಗೆಂದಾಗಲೀ, ಜ್ಞಾನಾರ್ಜನೆಗೆಂದಾಗಲೀ, ಅಥವಾ ಸಂಶೋಧನೆಗೆಂದಾಗಲೀ ಗ್ರಂಥಾಲಯದಲ್ಲಿ ಕಾಲಿಟ್ಟ ಯಾವನೇ ಒಬ್ಬ ಓದುಗನಿಗೆ ಅವನು ನಿರಾಶನಾಗಿ ಹೋಗದಂತೆ ಅಲ್ಲಿನ ವ್ಯವಸ್ಥೆ ಇರುತ್ತದೆ.

೧ ಗ್ರಂಥಗಳು ಉಪಯೋಗಕ್ಕಾಗಿವೆ

೨ ಓದುಗನಿಗೊಂದು ಪುಸ್ತಕವಿರುತ್ತದೆ

೩ ಪುಸ್ತಕಕ್ಕೊಬ್ಬ ಓದುಗನಿರುತ್ತಾನೆ

೪ ಓದುಗನ ವೇಳೆ ಉಳಿಯುವಂತೆ ನೋಡಿಕೊಳ್ಳಿ ಮತ್ತು

೫ ಗ್ರಂಥಾಲಯ ಬೆಳೆಯುವ ಸಂಸ್ಥೆ

ಎಂಬ ಈ ಗ್ರಂಥಾಲಯ ಪಂಚಸೂತ್ರಗಳನ್ನು ತಮ್ಮ ಲಕ್ಷದಲ್ಲಿಟ್ಟುಕೊಂಡು ಅಮೇರಿಕೆಯಲ್ಲಿಯ ಗ್ರಂಥಾಲಯ ವ್ಯವಸ್ಥಾಪಕರು, ಶಿಕ್ಷಣಾಧಿಕಾರಿಗಳು, ಜನಸಾಮಾನ್ಯರು, ಗ್ರಂಥಪಾಲರು, ಅಲ್ಲಿಯ ಗ್ರಂಥಾಲಯಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ.

ಪ್ರತಿಯೊಂದು ಗ್ರಂಥಾಲಯದಲ್ಲಿ ನೇರವಾಗಿ ಪುಸ್ತಕಗಳ

ನ್ನಿಟ್ಟ ಕಪಾಟಿಗೆ ಹೋಗಿ ನಿಮಗೆ ಬೇಕಾದ ಪುಸ್ತಕವನ್ನು ಆರಿಸಿಕೊಳ್ಳಲು ಅವಕಾಶವಿದೆ. ನಿಮಗೆ ಎಲ್ಲ ರೀತಿಯಿಂದಲೂ ಸಹಾಯ ಮಾಡಲು ತರಬೇತಿ ಹೊಂದಿದ, ಸೇವಾತುರರಾದ ಜನರಿರುತ್ತಾರೆ. ನಿಮಗೆ ಬೇಕಾದ ಗ್ರಂಥಗಳು ಅಲ್ಲಿವೆಯೋ ಇಲ್ಲವೋ ಎಂಬುದನ್ನು ತಿಳಿಸುವ ಗ್ರಂಥಸೂಚಿಗಳಿರುತ್ತವೆ. ನಿಮಗೆ ಬೇಕಾದ ವಿಷಯವನ್ನು ಒದಗಿಸಿಕೊಡುವ ಅಮೂಲ್ಯ-ವಾದ ಸಂದರ್ಭಗ್ರಂಥಗಳ ಸಂಗ್ರಹವಿರುತ್ತದೆ. ಹೊಚ್ಚಹೊಸ ವಿಚಾರ ಪ್ರಣಾಲಿಯನ್ನು ಪ್ರಸರಿಸುವ ನವೀನ ನಿಯತಕಾಲಿಕೆ-ಗಳಿರುತ್ತವೆ. ಪ್ರತಿಯೊಂದು ಗ್ರಂಥಾಲಯದಲ್ಲಿ ಪುಸ್ತಕಸಂಗ್ರಹ ವಲ್ಲದೆ ಗ್ರಾಮೋಫೋನ ರಿಕಾರ್ಡುಗಳೂ, ಫಿಲ್ಮುಗಳೂ, ಸ್ಲೈಡುಗಳೂ, ಫೋಟೋಗಳೂ, ಚಿತ್ರಗಳೂ, ನಕ್ಷೆಗಳೂ ಇದ್ದೇ ಇರುತ್ತವೆ. ನಿಮಗೆ ಬೇಕಾದ ಪುಸ್ತಕ ಆ ಗ್ರಂಥಾಲಯದಲ್ಲಿ ದೊರೆಯದಿದ್ದಲ್ಲಿ ಅದು ದೇಶದ, ಅದೇಕೆ ವಿಶ್ವದ ಯಾವದೇ ಗ್ರಂಥಾಲಯದಲ್ಲಿದ್ದರೂ ಅದನ್ನು ನಿಮ್ಮಸಲುವಾಗಿ ಎರವಲಾಗಿ ತಂದು ಒದಗಿಸಲಾಗುವದು. ಅಷ್ಟೇ ಏಕೆ, ನಿಮಗೆ ಯಾವ ದಾದರೊಂದು ಮಹತ್ವದ ಪುಸ್ತಕದ ಕೆಲವು ಪುಟಗಳಾಗಲೀ, ಕೆಲವೊಂದು ಅಧ್ಯಾಯಗಳಲ್ಲಿಯ ಮಾಹಿತಿಯಾಗಲೀ, ಅಥವಾ ದುರ್ಲಭವಾದ, ಅತ್ಯಮೂಲ್ಯವಾದ ಹಸ್ತಪ್ರತಿ-ಯಲ್ಲಿಯ ಮಾಹಿತಿಯಾಗಲೀ, ಬೇಕಾಗಿದ್ದಲ್ಲಿ ಅದನ್ನು "Micro Film" ಮೂಲಕವಾಗಿಯಾಗಲೀ, ಫೋಟೋ ಪ್ರತಿಯ ಮೂಲಕವಾಗಿಯಾಗಲೀ ತರಿಸಿಕೊಡುವ ವ್ಯವಸ್ಥೆ ಯುಂಟು. ಗ್ರಂಥಾಲಯಗಳು ನಿಜಕ್ಕೂ ಅಲ್ಲಿ ಮನರಂಜನೆಯ



ಗಾಲಿಯ ಗ್ರಂಥಾಲಯ ( ಒಳ ನೋಟ )

Courtesy
Wheat Loan Office, New Delhi

ಮಂಟಪಗಳಾಗಿ, ಪ್ರಯೋಗಶಾಲೆಗಳಾಗಿ, ಜ್ಞಾನಛತ್ರಗಳಾಗಿ ಕೆಲಸ ಮಾಡುತ್ತಿವೆ. ಅಂತೆಯೇ ಜನಾನುರಾಗವನ್ನು ಸಂಪಾದಿಸಿವೆ. ಒಕ್ಕಲುತನದಿಂದ ಹಿಡಿದು ವಿಮಾನ ಕಟ್ಟುವವರೆಗಿನ ಅಥವಾ ಅಣುಶಕ್ತಿಯನ್ನು ಉತ್ಪಾದಿಸುವ ಉದ್ಯಮದಲ್ಲಿ ಉಜ್ಜುಗಿಸುವ ಎಲ್ಲರಿಗೂ ಅವರವರ ಆವಶ್ಯಕತೆಗನುಸರಿಸಿ ಸಹಾಯವನ್ನು ಅವು ಸಲ್ಲಿಸುತ್ತವೆ.

ಇದು ಅಂಕಿಸಂಖ್ಯೆಗಳ ಯುಗ. ಅಂತೆಯೇ ಅಮೇರಿಕೆಯ ಗ್ರಂಥಾಲಯಗಳ ಬಗ್ಗೆ ಕೆಲವು ಅಂಕಿಸಂಖ್ಯೆಗಳನ್ನು ಇಲ್ಲಿ ಕೊಡುವ ಸಾಹಸ ಮಾಡಲಾಗಿದೆ. ತುಲನೆಗೆಂದು ಭಾರತದಲ್ಲಿಯ ಗ್ರಂಥಾಲಯಗಳ ಬಗ್ಗೆಯೂ ಕೆಲವು ಅಂಕಿಸಂಖ್ಯೆಗಳನ್ನು ಕೊಡಲಾಗಿದೆ.

ಅಮೇರಿಕೆಯಲ್ಲಿ ಒಟ್ಟು ೨೧,೩೮೮ಕ್ಕೂ ಮಿಕ್ಕಿ ಗ್ರಂಥಾಲಯಗಳಿವೆ. ಭಾರತದಲ್ಲಿ ೩.೨೧೦೦ ಗ್ರಂಥಾಲಯಗಳು. ಇವುಗಳಲ್ಲಿ ಜೀವಂತ ಜಾಗೃತವಾಗಿರುವ ಗ್ರಂಥಾಲಯಗಳ ಸಂಖ್ಯೆ ೨೦೦೦ ಕ್ಕೂ ಮಿಕ್ಕುವದಿಲ್ಲ. ಅಮೇರಿಕೆಯಲ್ಲಿಯ ಜನಸಂಖ್ಯೆ ೨೦ ಕೋಟಿ. ನಮ್ಮದೋ ೫೦ ಕೋಟಿಗೂ ಮಿಕ್ಕಿದೆ, ಇನ್ನೂ ಹೆಚ್ಚುತ್ತಲಿದೆ. ಅಮೇರಿಕೆಯಲ್ಲಿ ಸಾಧಾರಣವಾಗಿ ಪ್ರತಿವರ್ಷ ಗ್ರಂಥಾಲಯಗಳು ಪ್ರತಿಯೊಬ್ಬ ಓದುಗನ ಸಲುವಾಗಿ ೨೦ ರೂಪಾಯಿಗಳಿಂದ ಒಂದು ಸಾವಿರ ರೂಪಾಯಿಗಳ ವರೆಗೆ ಖರ್ಚು ಮಾಡುತ್ತವೆ.

ಅಮೇರಿಕೆಯ ಸಾಂಸ್ಕೃತಿಕ ಕೇಂದ್ರವೆನಿಸಿಕೊಳ್ಳುವ, ಇಡೀ ವಿಶ್ವದಲ್ಲಿಯೇ ಅತಿ ದೊಡ್ಡ ಗ್ರಂಥಾಲಯವಾದ ಅಮೇರಿಕೆಯ ರಾಷ್ಟ್ರೀಯ ಗ್ರಂಥಾಲಯದ (Library of Congress) ಬಗ್ಗೆ ಈ ಸಂದರ್ಭದಲ್ಲಿ ಉಲ್ಲೇಖಿಸುವದು ಅತಿ ಅವಶ್ಯ ಹಾಗು ಸಮರ್ಪಕ. ಕ್ರಿ.ಶ ೧೮೦೦ ರಲ್ಲಿ ಹುಟ್ಟಿದ ಈ ಗ್ರಂಥಾಲಯದಲ್ಲಿ ಇಂದಿಗೆ ೫ ಕೋಟಿ ೪೨ ಲಕ್ಷಕ್ಕೂ ಮಿಕ್ಕಿ ಗ್ರಂಥಗಳೂ, ನಿಯತಕಾಲಿಕೆಗಳೂ, ಗ್ರಾಮೋಫೋನ ರೆಕಾರ್ಡುಗಳೂ, ನಕಾಶಗಳೂ, ಕೈಬರಹದ ಪ್ರತಿಗಳೂ, ಕುರುಡರ ಸಲುವಾಗಿ ಬ್ರೇಲ್ ಹಾಗೂ ಮಾತಾಡುವ ಪುಸ್ತಕಗಳೂ ಉಂಟು. ಇಲ್ಲಿ ಪ್ರತಿನಿತ್ಯವೂ ೪೦೦೦ ಕ್ಕೂ ಮಿಕ್ಕಿ ಜನ ಜ್ಞಾನದಾಹವನ್ನಾರಿಸಿಕೊಳ್ಳಲಿಕ್ಕೋ, ಮನ-ರಂಜನೆ ಮಾಡಿಕೊಳ್ಳಲಿಕ್ಕೋ, ಹೆಚ್ಚಿನ ವಿಷಯ ಸಂಗ್ರಹ-ಕ್ಕಾಗಿಯೋ ಬರುವದುಂಟು. ಪ್ರತಿವಾರವೂ ಗ್ರಂಥಾಲಯ ೫,೦೦೦ಕ್ಕೂ ಮಿಕ್ಕಿ ಹೊಸ ಹೊಸ ಗ್ರಂಥಗಳನ್ನು ಬರಮಾಡಿ-ಕೊಂಡು ಅವುಗಳನ್ನು ವರ್ಗೀಕರಿಸಿ, ಸೂಚೀಕರಿಸಿ ಓದುಗರ ಉಪಯೋಗಕ್ಕಾಗಿ ಅಣಿ ಮಾಡಿ ಇಡುತ್ತದೆ. ಜಗತ್ತಿನ ಮೂಲೆ ಮೂಲೆಗಳಿಂದ ಇಲ್ಲಿ ಗ್ರಂಥಗಳು ಬಂದು ಬೀಳುತ್ತವೆ.

ಈ ಗ್ರಂಥಾಲಯದ 'ಅಮೂಲ್ಯಗ್ರಂಥ ಶಾಖೆ' ಯಲ್ಲಿ ೩ ಲಕ್ಷಕ್ಕೂ ಮೀರಿ ಗ್ರಂಥಗಳಿವೆ. ಮುದ್ರಣ ಕಲೆಯನ್ನು ಪಾಶ್ಚಾತ್ಯರು ಅರಿತುಕೊಂಡದ್ದು ಸು. ೧೪ ನೇ ಶತಮಾನದಲ್ಲಿ ಎಂಬ ಮಾತನ್ನು ನಾವು ಲಕ್ಷ್ಯದಲ್ಲಿ ತಂದುಕೊಂಡಾಗ ಕ್ರಿ. ಶ. ೧೫೦೧ ಕ್ಕೆ ಮುಂಚಿತವಾಗಿ ಅಚ್ಚಾದ ೫೬೦೦ ಗ್ರಂಥಗಳನ್ನು

ಈ ಗ್ರಂಥಾಲಯ ಸಂಗ್ರಹಿಸಿದೆಯೆಂಬ ಮಾತು ನಮ್ಮನ್ನು ಮೂಕವಿಸ್ಮಿತರನ್ನಾಗಿ ಮಾಡದೇ ಬಿಡದು. ಚಲಿಸುವ ಅಚ್ಚುಗಳಲ್ಲಿ ಪ್ರಪ್ರಥಮವಾಗಿ ಅಚ್ಚಾದ (೧೪೫೬) ಗುಟ್ಟೆನ್ ಬರ್ಗ್ ಬೈಬಲ್ಲೂ ಇಲ್ಲಿದೆ.

ಈ ಮಹಾಗ್ರಂಥಾಲಯವು ೬ ಎಕರೆ ಭೂಮಿಯನ್ನು ಆವರಿಸುವ ಎರಡು ಭವ್ಯ ಕಟ್ಟಡಗಳಲ್ಲಿ ವಾಸವಾಗಿದೆ. ಬಹು ವಿಶಾಲವಾದ ರಾಜಬೀದಿಯೊಂದರ ಎಡಬಲದಲ್ಲಿರುವ ಈ ಎರಡೂ ಕಟ್ಟಡಗಳಲ್ಲಿನ ಒಟ್ಟು ಸ್ಥಳ ೩೬ ಎಕರೆಗೂ ಮಿಕ್ಕ-ಬಹುದು. ನೆಲಮಾರ್ಗವೊಂದು ಎರಡೂ ಕಟ್ಟಡಗಳನ್ನು ಜೋಡಿಸುತ್ತದೆ. ನೆಲಮಾರ್ಗದ ಗುಂಟ ಇರುವ ನ್ಯೂಮಾಟಿಕ್ ಟ್ಯೂಬುಗಳು ಗ್ರಂಥಗಳನ್ನು ಒಂದು ಕಟ್ಟಡದಿಂದ ಮತ್ತೊಂದು ಕಟ್ಟಡಕ್ಕೆ ಕೇವಲ ೩೦ ಸೆಕೆಂಡುಗಳಲ್ಲಿ ಮುಟ್ಟಿಸುತ್ತವೆ. ಈ ಗ್ರಂಥಾಲಯದಲ್ಲಿದ್ದ ಪುಸ್ತಕಗಳ ಕಪಾಟುಗಳನ್ನು ಸಾಲಾಗಿ ನಿಲ್ಲಿಸಿದರೆ ಆ ಸಾಲು ೨೭೦ ಮೈಲುಗಳಿಗೂ ಮಿಕ್ಕಬಹುದು. ಇದಕ್ಕಾಗಿಯೇ ಅಮೇರಿಕೆಯ ಜನ ಕಾಂಗ್ರೆಸ್ ಗ್ರಂಥಾಲಯ ವನ್ನು "ಮೈಲುಗಟ್ಟಲಿನ ಜ್ಞಾನಭಾಂಡಾರ" (Miles of Knowledge) ಎಂದು ಎದೆಯುಬ್ಬಿದವರಾಗಿ ಕರೆಯುವರು. ಈ ಗ್ರಂಥಾಲಯದಲ್ಲಿ ಒಟ್ಟು ೩೪೦೦ ಜನ ಕೆಲಸಗಾರರಿದ್ದಾರೆ. ೧೯೬೪ ರಲ್ಲಿ ಈ ಗ್ರಂಥಾಲಯದ ಆಯವ್ಯಯ ಪಟ್ಟಿಯು ಒಟ್ಟು ೨ ಕೋಟಿ ೮೭ ಲಕ್ಷ ಡಾಲರುಗಳ ಆದಾಯವನ್ನು ತೋರಿಸು-ತ್ತಿತ್ತು. ೧೯೪೯ ರಲ್ಲಿ ಈ ಗ್ರಂಥಾಲಯವನ್ನು ನಡೆಸಿಕೊಂಡು

ಹೋಗುವ ವೆಚ್ಚ ಪ್ರತಿ ಅಮೇರಿಕನ್ ನಾಗರಿಕನಿಗೆ ಕೇವಲ ೫ ಸೆಂಟಿನ ಕರದಷ್ಟಾಗಿತ್ತು. (೫ ಸೆಂಟು ನಮ್ಮ ೨೫ ಪೈಸೆಗಳಷ್ಟಾಗಬಹುದು.) ಇಲ್ಲಿ ಅನೇಕ ಕನ್ನಡ ಗ್ರಂಥಗಳೂ ಇವೆ.

ಇದೆಲ್ಲ ಅಲ್ಲದೆ ಅಮೇರಿಕೆಯಲ್ಲಿ ಹಳ್ಳಿಗಳಿಗೆ, ಆಸ್ಪತ್ರೆ-ಗಳಿಗೆ ಪುಸ್ತಕಗಳನ್ನೊದಗಿಸಲು ಮೋಟರ ಗ್ರಂಥಾಲಯ-ಗಳು, ಗಾಲಿಯ ಗ್ರಂಥಾಲಯಗಳು ಬಹು ಸಂಖ್ಯೆಯಲ್ಲಿವೆ. ಸೆರೆಮನೆಯಲ್ಲಿಯ ಕೈದಿಗಳಿಗೆ, ಸೈನಿಕರಿಗೆ, ಹಡಗು ಹಾಗೂ ವಿಮಾನ ಪಡೆಯಲ್ಲಿದ್ದವರಿಗೆ ಪುಸ್ತಕಗಳನ್ನೊದಗಿಸಲು ವಿಶೇಷ ವ್ಯವಸ್ಥೆಯುಂಟು. ಇಷ್ಟೆಲ್ಲ ಇದ್ದರೂ, ಅಮೇ-ರಿಕನ್ನರು ತಮ್ಮಲ್ಲಿಯ ಸುಮಾರು ೭ ಕೋಟಿ ಜನತೆಗೆ ಆದರ್ಶ ಗ್ರಂಥಾಲಯ ಸೇವೆ ಇನ್ನೂವರೆಗೆ ಸಲ್ಲುತ್ತಿರುವದಿಲ್ಲೆಂದು ಹೇಳುತ್ತಾರೆ.

---

# ೪ ಭಾರತದಲ್ಲಿಯ ಗ್ರಂಥಾಲಯಗಳು

ಅಮೇರಿಕೆ ಗ್ರಂಥಾಲಯ ಚಳುವಳಿಯಲ್ಲಿ ಇಷ್ಟೊಂದು ಪ್ರಗತಿಯನ್ನು ಹೊಂದಿದೆ. ಹೊಚ್ಚ ಹೊಸ ದೇಶವಾದ ಅಮೇರಿಕೆ ಕಳೆದ ನಾಲ್ಕು ನೂರು ವರ್ಷಗಳಲ್ಲಿ ಇಂಥ ಅದ್ಭುತ ಪ್ರಗತಿಯನ್ನು ಸಾಧಿಸಿದ್ದರೆ, ನಾವು, ಸಹಸ್ರಾರು ವರ್ಷಗಳ ಸಂಸ್ಕೃತಿ, ಇತಿಹಾಸವುಳ್ಳ ನಾವು, ಈ ದಿಸೆಯಲ್ಲಿ ಏನು ಸಾಧಿಸಿದ್ದೇವೆ? ನಮ್ಮಲ್ಲಿ ಗ್ರಂಥಾಲಯಗಳಿರಲಿಲ್ಲವೇ? ನಮ್ಮ ಪೂರ್ವಜರು ಇಂಥ ಸಂಸ್ಥೆಗಳನ್ನು ಕಟ್ಟಲಿಲ್ಲವೇ? ಇವೇ ಮೊದಲಾದ ಸಂದೇಹಗಳು ನಮ್ಮ ಬಗೆಗಣ್ಣಿನ ಮುಂದೆ ತಾಂಡವವಾಡುವದು ಸಹಜ.

ಇಂದಿನ ನಮ್ಮ ಗ್ರಂಥಾಲಯಗಳ ಪರಿಸ್ಥಿತಿಯನ್ನು ಕುರಿತು ಚರ್ಚಿಸುವ ಮೊದಲು, ಮುಂದಿನ ಯೋಜನೆಗಳ ಬಗ್ಗೆ ಕನಸು ಕಟ್ಟುವ ಮೊದಲು, ಸ್ವಲ್ಪ ಹಿಂದಿರುಗಿ ನೋಡಿ ಈ ದಿಶೆಯಲ್ಲಿ ನಾವೇನು ಸಾಧಿಸಿದ್ದೇವೆ ಎಂಬುದನ್ನು ಅರಿತು ಮುನ್ನಡೆದರೆ ನಮ್ಮ ಗುರಿ ಹೆಚ್ಚು ನಿಚ್ಚಳವಾದೀತು.

## ಅ ಪ್ರಾಚೀನ ಯುಗ

ಪ್ರಪಂಚದಲ್ಲಿಯ ಪ್ರಾಚೀನ ಸಂಸ್ಕೃತಿಗಳ ಏಳು ತೊಟ್ಟಿಲುಗಳಲ್ಲಿ ಭಾರತ ಒಂದಾಗಿತ್ತು. ಸಿಂಧೂ ನದಿಯ

ಕೊಳ್ಳದ ಸಂಸ್ಕೃತಿ ಐದು ಸಾವಿರ ವರ್ಷಗಳಿಗೂ ಮಿಕ್ಕಿ ಪುರಾತನವಾದುದು. ಮೋಹೆಂಜೊದಾರೊ, ಹರಪ್ಪಾ-ಗಳಲ್ಲಿಯ ಐತಿಹಾಸಿಕ ಅವಶೇಷಗಳು ೫ ಸಾವಿರ ವರುಷಗಳ ಹಿಂದೆ ಅಲ್ಲಿ ಬಾಳಿ ಬದುಕಿದ ಜನತೆ ಅತ್ಯಂತ ಸುಸಂಸ್ಕೃತ ಜನತೆಯಾಗಿತ್ತೆಂದು ಸಾರಿ ಹೇಳುತ್ತಿವೆ. ಅಲ್ಲಿ ದೊರೆತ ಬಿಲ್ಲೆಗಳ ಮೇಲಿನ ಬರಹವನ್ನು ಇನ್ನೂ ಯಾರಿಗೂ ಓದಲು ಸಾಧ್ಯವಾಗಿಲ್ಲ. ಅದು ಸಾಧಿಸಿದ ನಂತರ ಭಾರತವೇ ಬರಹದ ತವರಾಗಿತ್ತು, ಇಲ್ಲಿಂದಲೇ ಬರವಣಿಗೆಯ ಕಲೆ ವಿಶ್ವದ ಉಳಿದ ಭಾಗಗಳಿಗೆ ಹರಡಿತು ಎಂದು ಹೇಳಲು ಸಾಧ್ಯವಾಗಬಹುದೇನೋ.

ವೇದಗಳ ಕಾಲ ಕ್ರಿ. ಪೂ. ೨೫೦೦–೧೫೦೦ ಎಂದು ಸಂಶೋಧಕರು ಹೇಳುತ್ತಾರೆ. ವೇದಗಳನ್ನು ರಚಿಸಿದ ಜನ ಬರವಣಿಗೆಯನ್ನು ಅರಿತಿರಲಿಕ್ಕಿಲ್ಲವೇ ? ಈ ಮೊದಲೇ ಹೇಳಿ-ದಂತೆ ನಮ್ಮ ಪೂರ್ವಜರು ಕಲ್ಲು, ಗಿಡದ ತೊಗಟೆ, ತಾಡವೋಲೆ, ಮುಂತಾದವುಗಳನ್ನು ಬರೆಯಲು ಉಪಯೋಗಿಸುತ್ತಿದ್ದರು. ಗ್ರಂಥಗಳನ್ನು ಬರೆಯುವವರು ಒಂದು ವಿಶೇಷ ಗುಂಪಿನವರೇ ಆಗಿದ್ದರು. ಇವರಿಗೆ "ಲಿಪಿಕಾರ" ರೆಂದೂ "ದಿವಿರಪತಿ" ಗಳೆಂದೂ "ಕಾಯಸ್ಥ"ರೆಂದೂ ಹಾಗೂ "ಲೇಖಕ"ರೆಂದೂ ಕರೆಯಲಾಗುತ್ತಿತ್ತು.

ಪ್ರಾಚೀನ ಇತಿಹಾಸದುದ್ದಕ್ಕೂ ಇಂಥ ಬರಹಗಳ ಸಂಗ್ರಹಗಳ ಬಗ್ಗೆ ಉಲ್ಲೇಖಗಳನ್ನು ಕಾಣುತ್ತೇವೆ.

ಇಂಥ ಸಂಗ್ರಹಗಳು ಮಠಗಳ, ವಿಹಾರಗಳ, ಗುಡಿಗುಂಡಾರಗಳ ಅಂಗಗಳಾಗಿ ಶೋಭಿಸುತ್ತಿದ್ದವು. ೬ನೆಯ ಶತಮಾನದಿಂದ ೧೩ನೆಯ ಶತಮಾನದವರೆಗೆ ಬೌದ್ಧ ವಿಹಾರಗಳೂ, ಹಿಂದೂ ಗುಡಿಗಳೂ, ಜೈನರ ಚೈತ್ಯಗಳೂ ಇಂಥ ಕೆಲಸವನ್ನು ಕೈಕೊಂಡವು.

ಹಿಂದೂ ಗುಡಿಗಳು ೧೦ನೇ ಶತಮಾನದ ನಂತರವೇ ಹೆಚ್ಚಾಗಿ ಇಂಥ ಕಾರ್ಯ ಕೈಕೊಂಡವು. ಅರಮನೆಗಳಲ್ಲೂ, ವಿದ್ವಾಂಸರ ಹಾಗೂ ಸಿರಿವಂತರ ಭವನಗಳಲ್ಲೂ ಇಂಥ ಸಂಗ್ರಹಗಳು ಕಂಗೊಳಿಸುತ್ತಿದ್ದವು. ಇಂಥ ಕೆಲವು ದೊಡ್ಡ ಸಾರ್ವಜನಿಕ ಸಂಗ್ರಹಗಳಿಗೆ " ಭಾರತೀ ಭಾಂಡಾರ"ಗಳೆಂದೂ, " ಸರಸ್ವತೀ ಭಾಂಡಾರ"ಗಳೆಂದೂ ಕರೆಯಲಾಗುತ್ತಿತ್ತು.

ಕೆಲವು ಮಠಗಳು ಮತ್ತು ಜೈನ, ಹಿಂದೂ, ಬೌದ್ಧ ಧರ್ಮಸಂಸ್ಥೆಗಳು ಬೆಳೆದು ದೊಡ್ಡವಾಗಿ ವಿಶ್ವವಿದ್ಯಾಲಯಗಳೆಂದು ಮೆರೆದವು. ಇವಕ್ಕೆ "ವಿದ್ಯಾಮಠ" ಗಳೆಂದೂ, "ಘಟಿಕ"ಗಳೆಂದೂ ಕರೆಯಲಾಗುತ್ತಿತ್ತು. ಇಂಥ ವಿಶ್ವವಿದ್ಯಾಲಯಗಳಲ್ಲಿ, ಧರ್ಮಸಂಸ್ಥೆಗಳಲ್ಲಿ, ಕೆಲಸ ಮಾಡುತ್ತಿದ್ದ ಹಿಂದೂ, ಬೌದ್ಧ ಹಾಗೂ ಜೈನ ಸನ್ಯಾಸಿಗಳೂ, ಅವರ ಅನುಯಾಯಿಗಳೂ ಕೈಬರಹಗಳನ್ನು ತಯಾರಿಸುವಲ್ಲಿ, ಪ್ರತಿಗಳನ್ನು ಮಾಡುವಲ್ಲಿ ಶ್ರದ್ಧೆಯಿಂದ, ವಿಶ್ವಾಸದಿಂದ, ಪ್ರೀತಿಯಿಂದ ಕೆಲಸ ಮಾಡುತ್ತಿದ್ದರು. ಇಲ್ಲಿ ಕೈಬರಹಗಳನ್ನು ಕೂಡಿಡುವ ಜೊತೆಗೆ ಮಾರುವ ವ್ಯವಸ್ಥೆಯೂ ಇತ್ತು.

## ನಲಂದಾ

ಇಂಥ ವಿಶ್ವವಿದ್ಯಾಲಯಗಳ ಗ್ರಂಥಭಾಂಡಾರಗಳಲ್ಲಿ ಕೆಲವೊಂದು ವಿಶ್ವಖ್ಯಾತಿವೆತ್ತವು. ಇವುಗಳಲ್ಲಿ ನಲಂದಾ ವಿಶ್ವವಿದ್ಯಾಲಯದ ಗ್ರಂಥಾಲಯ ಪ್ರಮುಖವಾದುದು. ನಲಂದಾ ಬೌದ್ಧ ವಿಶ್ವವಿದ್ಯಾಲಯ. ಬಿಹಾರದಲ್ಲಿಯ ಈಗಿನ ಬಾರಾಗಾಂವ ಹಳ್ಳಿಯೇ ಹಿಂದಿನ ಕಾಲದ ನಲಂದಾ ನಗರವಾಗಿದ್ದಿತು. ಮಗಧ ದೇಶದ ಅರಸನಾದ ಬಲಾದಿತ್ಯನು ಕ್ರಿ. ಶ. ೩೦೦ ರಲ್ಲಿ ಇಲ್ಲಿ ಅತಿ ಸುಂದರವಾದ ಬೌದ್ಧವಿಹಾರವನ್ನು ಕಟ್ಟಿಸಿದನು. ಮುಂದಿನ ೧೫೦ ವರ್ಷಗಳಲ್ಲಿ ಈ ಸಂಸ್ಥೆ ಬೆಳೆದು, ಬಲಿತು ವಿಶ್ವವಿದ್ಯಾಲಯವಾಯಿತು. ವಿಶ್ವವಿದ್ಯಾಲಯವಿದ್ದ ನಲಂದಾ ಭಾಗಕ್ಕೆ “ಧರ್ಮಗಂಜ”ವೆಂದು ಕರೆಯುತ್ತಿದ್ದರು. ವಿಶ್ವವಿದ್ಯಾಲಯವು “ರತ್ನೋದಧಿ”,“ರತ್ನರಂಜಕ” ಮತ್ತು “ರತ್ನಾಗರ” ಎಂಬ ನಾಮಧೇಯವುಳ್ಳ ೩ ಭವ್ಯಮಂದಿರಗಳಲ್ಲಿ ಕಂಗೊಳಿಸುತ್ತಿತ್ತು. ಒಂಭತ್ತು ಅಂತಸ್ತಿನ “ರತ್ನೋದಧಿ”ಯೇ ಗ್ರಂಥಾಲಯದ ಕಟ್ಟಡವಾಗಿತ್ತು. ಚೀನಾ ದೇಶದ ಪ್ರಸಿದ್ಧ ಬೌದ್ಧ ಭಿಕ್ಷುವಾದ ಹುಯನ್‌ತ್ಸಾಂಗನು ಈ ವಿಶ್ವವಿದ್ಯಾಲಯಕ್ಕೆ ೭ನೇ ಶತಮಾನದಲ್ಲಿ ಭೇಟಿ ಇತ್ತಾಗ ವಿಶ್ವವಿದ್ಯಾಲಯದಲ್ಲಿ ಹತ್ತು ಸಾವಿರ ವಿದ್ಯಾರ್ಥಿಗಳು ಓದುತ್ತಿದ್ದರು. ಮರಳಿ ಸ್ವದೇಶಕ್ಕೆ ಹೋಗುವಾಗ್ಗೆ ಹುಯನ್‌ತ್ಸಾಂಗನು, ‘ಚಕ್ಕಡಿಗಟ್ಟಲೆ’ ಕೈಬರಹದ ಪ್ರತಿಗಳನ್ನು ಈ ಗ್ರಂಥಾಲಯದಿಂದ ಮಾಡಿಸಿಕೊಂಡು ಹೋದನೆಂದು ಪ್ರತೀತಿ ಇದೆ.

ಅದೇ ಸಮಯಕ್ಕೆ ನಲಂದಾಕ್ಕೆ ಭೇಟಿ ಇತ್ತ ಇತ್ಸಿಂಗ್ ಎಂಬ ಇನ್ನೊಬ್ಬ ಚೀನಾ ದೇಶದ ಪ್ರವಾಸಿಯು (ಹುಯನ್-ತ್ಸಾಂಗನು ಭೇಟಿ ಇತ್ತು ೩೦ ವರ್ಷಗಳ ನಂತರ) ನಲಂದಾ ವಿಶ್ವವಿದ್ಯಾಲಯದಿಂದಲೇ ೫ ಲಕ್ಷ ಶ್ಲೋಕಗಳುಳ್ಳ ನಾಲ್ಕು-ನೂರು ಸಂಸ್ಕೃತಗ್ರಂಥಗಳ ಪ್ರತಿಗಳನ್ನು ಮಾಡಿಸಿಕೊಂಡು ಹೋದನು. ೯ ನೆಯ ಶತಮಾನದಲ್ಲಿ ನಲಂದಾ ಅಂತರ-ರಾಷ್ಟ್ರೀಯ ಖ್ಯಾತಿ ಪಡೆದಿತ್ತು. ಜಾವಾ ದ್ವೀಪದ ಅರಸು ಬಲಪುತ್ರದೇವನು ಇದಕ್ಕೆ ಭೇಟಿಯಿತ್ತು ಇಲ್ಲಿ ಒಂದು ಮಠ ವನ್ನು ಕಟ್ಟಿಸಿ, ಆ ಮಠದ ಸಲುವಾಗಿ ತನ್ನ ಮಿತ್ರ ದೇವಪಾಲ ನಿಗೆ (ಬಂಗಾಲ ದೇಶದ ರಾಜ) ೫ ಹಳ್ಳಿಗಳನ್ನು ದಾನವಾಗಿ ಕೊಡಲು ಬಿನ್ನವಿಸಿಕೊಂಡಿದ್ದನೆಂದು ಇತಿಹಾಸಕಾರರು ಹೇಳುತ್ತಾರೆ.

## ತಕ್ಷಶಿಲೆ, ಬನಾರಸ

ತಕ್ಷಶಿಲೆ ಮತ್ತು ಬನಾರಸಗಳಲ್ಲಿಯೂ ಇಂಥ ವಿಶ್ವ-ವಿದ್ಯಾಲಯಗಳು ಮೆರೆದು ಶೋಭಿಸಿದ ಕಾಲ ಅದು. ತಕ್ಷಶಿಲೆಯಲ್ಲಿ, ವ್ಯಾಕರಣ ಪಂಡಿತ ಪಾಣಿನಿ, ಅರ್ಥಶಾಸ್ತ್ರ-ಪಂಡಿತ ಕೌಟಿಲ್ಯ, ಆಯುರ್ವೇದ ಶಾಸ್ತ್ರಜ್ಞ ಚರಕ, ಇವರೇ ಮೊದಲಾದ ಮಹಾಮೇಧಾವಿಗಳು ಪಾಠ ಹೇಳಿ ಕೊಡು-ತ್ತಿದ್ದರು. ನಲಂದಾ ವಿಶ್ವವಿದ್ಯಾಲಯ ಧಾರ್ಮಿಕ ವಿಷಯ ಗಳಿಗೆ ಹೆಚ್ಚು ಪ್ರಾಶಸ್ತ್ಯ ಕೊಟ್ಟಿದ್ದರೆ, ತಕ್ಷಶಿಲೆ ಪ್ರಾಪಂಚಿಕ ವಿಷಯಗಳಿಗೆ ಪ್ರಾಧಾನ್ಯ ಕೊಟ್ಟಿತ್ತು.

## ಸೌರಾಷ್ಟ್ರ

ಸೌರಾಷ್ಟ್ರದಲ್ಲಿಯ ವಲಭಿ ಎಂಬ ನಗರದಲ್ಲಿ ಕ್ರಿ. ಶ. ೪೮೦-೭೭೫ ರ ವರೆಗೆ ಆಳುತ್ತಿದ್ದ ವೈತ್ರಕ ಅರಸರು ಅಲ್ಲಿ ಒಂದು ಒಳ್ಳೇ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದರು. ಈ ವಿಶ್ವವಿದ್ಯಾಲಯದ ಗ್ರಂಥಾಲಯವೂ ಹೆಸರುವಾಸಿ-ಯಾಗಿತ್ತು.

## ಕರ್ನಾಟಕ

ಕರ್ನಾಟಕದಲ್ಲಿಯೂ ಕೂಡ ಹಲವಾರು ವಿಶ್ವವಿದ್ಯಾ-ಲಯಗಳೂ ಅವುಗಳ ಗ್ರಂಥಾಲಯಗಳೂ ಕೆಲವೊಂದು ಕಾಲ ಬಾಳಿ, ಬದುಕಿ, ಕೀರ್ತಿವೆತ್ತು ಹೋದವು. ಕದಂಬ, ರಾಷ್ಟ್ರಕೂಟ, ಚಾಳುಕ್ಯ, ಹೊಯ್ಸಳರಾಜರು, ಅವರ ಮಾಂಡಲಿಕರು ಸಾಮಾನ್ಯವಾಗಿ ಸಾಹಿತ್ಯಪ್ರಿಯರೂ, ಗ್ರಂಥ ಪ್ರಿಯರೂ ಆಗಿದ್ದರು. ಅಂತೆಯೇ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸುವಲ್ಲಿ, ಅವುಗಳ ಜೊತೆಗೆ ಗ್ರಂಥಾಲಯಗಳನ್ನು ಸ್ಥಾಪಿಸುವಲ್ಲಿ, ಬಹಳ ಆಸ್ಥೆ ವಹಿಸುತ್ತಿದ್ದರು. ತಾಳಗುಂದ, ಪಾವಿಟ್ಟಗೆ (ಸಾಲೋಟಗಿ), ನಾಗಾವಿ, ಬಳ್ಳಿಗಾಂವಿ, ಕುಪ್ಪ-ಟೂರು, ಐಹೊಳೆ, ಪಟ್ಟದಕಲ್ಲು ಮುಂತಾದ ಸ್ಥಳಗಳಲ್ಲಿ ವಿಶ್ವವಿದ್ಯಾಲಯಗಳಿದ್ದವೆಂದು ಶಾಸನಗಳು ಸಾರಿ ಹೇಳುತ್ತಿವೆ.

೧೦ನೆಯ ಶತಮಾನದಲ್ಲಿ ಆಳುತ್ತಿದ್ದ ರಾಷ್ಟ್ರಕೂಟ ಅರಸು ಮುಮ್ಮಡಿ ಕೃಷ್ಣರಾಜನಿಗೆ ಗಜಾಂಕುಶ ನಾರಾಯಣ

ನೆಂಬ ಮುಖ್ಯಮಂತ್ರಿಯಿದ್ದನು. ಈ ಮಂತ್ರಿಯ ಉಪ-ಮಂತ್ರಿಯಾದ ಚಕ್ರಾಯುಧಬುಧನು ಪಾವಿಟ್ಟಗೆಯಲ್ಲಿ ಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸಿ, ೯೪೫ ರಲ್ಲಿ ಪಾವಿಟ್ಟಗೆ-ಯಲ್ಲಿಯ ೧೨೫ ಎಕರೆ ಭೂಮಿಯನ್ನು ಆ ವಿಶ್ವವಿದ್ಯಾಲಯಕ್ಕೆ, ಅಲ್ಲಿ ಓದುತ್ತಿರುವ ವಿದ್ಯಾರ್ಥಿಗಳ ಪೋಷಣೆಗಾಗಿ ಉಚಿತ-ವಾಗಿ ಕೊಟ್ಟನು. ಇದಲ್ಲದೆ ಊರಲ್ಲಿದ್ದ ೨೭ ಭವನಗಳನ್ನು ವಿದ್ಯಾರ್ಥಿಗಳ ವಸತಿಗೃಹವೆಂದು ಮಾರ್ಪಡಿಸಿಕೊಳ್ಳಲಿಕ್ಕೆ ವಿಶ್ವವಿದ್ಯಾಲಯಕ್ಕೆ ದಾನವಾಗಿ ಕೊಟ್ಟನು.

೧೧ ನೆಯ ಶತಮಾನದ ಮಧ್ಯದಲ್ಲಿ (ಸು. ೧೦೫೮ ರಲ್ಲಿ) ಸಾಗಾಯಿಯೆಂಬಲ್ಲಿಯ ಮಧುಸೂದನ ದಂಡನಾಯಕನು ಅಲ್ಲಿಯ ವಿಶ್ವವಿದ್ಯಾಲಯಕ್ಕೆ ೭೫೦ ಎಕರೆ ಭೂಮಿಯನ್ನು ಉಚಿತವಾಗಿ ಕೊಟ್ಟನು. ಆ ಸಮಯದಲ್ಲಿ ಈ ವಿಶ್ವ-ವಿದ್ಯಾಲಯದಲ್ಲಿ ೨೦೦ ವಿದ್ಯಾರ್ಥಿಗಳು ವೇದಾಧ್ಯಯನವನ್ನೂ, ೫೨ ವಿದ್ಯಾರ್ಥಿಗಳು ಶಾಸ್ತ್ರಾಧ್ಯಯನವನ್ನೂ ಮಾಡುತ್ತಿದ್ದರು. ಶಾಸ್ತ್ರಗಳನ್ನು ಹೇಳಿಕೊಡಲು ೩ ಜನ ಹಾಗೂ ಭಾಟ್ಟ-ದರ್ಶನ ಕಲಿಸಲು ೩ ಜನ ಮಹಾಮಹೋಪಾಧ್ಯಾಯರನ್ನು ವಿಶ್ವವಿದ್ಯಾಲಯವು ನಿಯಮಿಸಿಕೊಂಡಿತ್ತು. ಇದಲ್ಲದೆ ಗ್ರಂಥಾಲಯವನ್ನು ನೋಡಿಕೊಳ್ಳಲು ೬ ಜನ ಗ್ರಂಥ-ಪಾಲರನ್ನು ನಿಯಮಿಸಿಕೊಂಡಿತ್ತು. ಇವರೆಲ್ಲರ ಪೋಷಣೆಗಾಗಿ ಮೇಲೆ ಹೇಳಿದ ದತ್ತಿಯನ್ನು ವಿಶ್ವವಿದ್ಯಾಲಯಕ್ಕೆ ಕೊಡ-ಲಾಗಿತ್ತು.

ಈ ಉಪಾಧ್ಯಾಯರುಗಳಲ್ಲಿ ಹಾಗೂ ಗ್ರಂಥಪಾಲರಲ್ಲಿ ಈ ಕೆಳಗಿನಂತೆ ಭೂಮಿಯನ್ನು ಹಂಚಲಾಗಿತ್ತು.

| | |
|---|---|
| ಭಾಟ್ಟದರ್ಶನ ಪ್ರಾಧ್ಯಾಪಕ | ೨೬ ಎಕರೆ |
| ನ್ಯಾಯ ದರ್ಶನ ,, | ೨೨ ,, |
| ಗ್ರಂಥಪಾಲ ,, | ೨೨ ,, |

ಆರ್ಯಪುರವೆಂದು ಕರೆಯಲ್ಪಡುತ್ತಿದ್ದ ಐಹೊಳೆಯಲ್ಲಿ ಕೂಡ ೫ ನೇ ಶತಮಾನದಲ್ಲಿ ವಿಶ್ವವಿದ್ಯಾಲಯವೊಂದು ಮೆರೆದು ಹೋಯಿತಂತೆ. ಈ ವಿಶ್ವವಿದ್ಯಾಲಯದಲ್ಲಿ ಐದು-ನೂರು ಜನ ಪಂಡಿತರು ಪಾಠ ಹೇಳಿಕೊಡುತ್ತಿದ್ದರಂತೆ.

ವಿಜಯನಗರದ ಅರಸರ ಕಾಲದಲ್ಲಿಯೂ ಕೂಡ ಶೈಕ್ಷಣಿಕ ಹಾಗೂ ಸಾರ್ವಜನಿಕ ವಾಚನಾಲಯಗಳಿದ್ದ-ವೆಂದು ತಿಳಿದು ಬರುತ್ತದೆ. ಬುಕ್ಕರಾಜನು ಶೃಂಗೇರಿ ಮಠದಲ್ಲಿಯ ಗ್ರಂಥಾಲಯದ ಸುವ್ಯವಸ್ಥೆಗಾಗಿ ಪುರಾಣಿಕ ಕವಿ ಕೃಷ್ಣಭಟ್ಟನಿಗೆ ಭೂಮಿಯನ್ನು ದಾನವಾಗಿ ಕೊಟ್ಟ ವದಂತಿ ಇದೆ.

## ಬಿಹಾರ

ಬಿಹಾರದ ಪಾಲರಾಜನು ವಿಕ್ರಮಶೀಲ ಹಾಗೂ ಒಡೆಂತಾಪುರಗಳಲ್ಲಿ ಎರಡು ಗ್ರಂಥಾಲಯಗಳನ್ನು ಸ್ಥಾಪಿಸಿ-ದನು. ಈ ಗ್ರಂಥಾಲಯಗಳನ್ನು ೧೩ ನೇ ಶತಮಾನದಲ್ಲಿ ಭಕ್ತಿಯಾರ ಖಿಲಜಿಯು ನೆಲಸಮ ಮಾಡಿದನು

**ಗುಜರಾತ**

ಗುಜರಾತದ ಚಾಲುಕ್ಯರಾಜರೂ ಒಳ್ಳೆಯ ಗ್ರಂಥಾಲಯುಗಳನ್ನು ನಡೆಸಿಕೊಂಡು ಬಂದಿದ್ದರು. ವಿಶಾಲದೇವ ಚಾಲುಕ್ಯನ ಗ್ರಂಥಾಲಯದಲ್ಲಿ "ಕಾಮಸೂತ್ರ", "ನೈಷಧೀಯ", ಹಾಗೂ "ರಾಮಾಯಣ", ಇವುಗಳ ಕೈಬಗಹದ ಪ್ರತಿಗಳಿದ್ದವಂತೆ. ಈ ರಾಮಾಯಣದ ಪ್ರತಿ ಈಗ ಬಾನ್ (ಜರ್ಮನಿ) ವಿಶ್ವವಿದ್ಯಾಲಯದಲ್ಲಿದೆ.

ಬಾಣ ಕವಿಯು (ಕ್ರಿ. ಶ. ೬೨೦) ತನ್ನ ಸ್ವಂತದ ಉಪಯೋಗಕ್ಕಾಗಿ ಒಂದು ಗ್ರಂಥ ಸಂಗ್ರಹವನ್ನು ಕಲೆ ಹಾಕಿದ್ದನು. ಈ ಸಂಗ್ರಹದಲ್ಲಿಯ ಕೈಬರೆಹದ ಪುಸ್ತಕಗಳನ್ನೋದುವದಕ್ಕೋಸ್ಕರ ಅವನು ಒಬ್ಬ "ಪುಸ್ತಕ ವಾಚಕ"ನನ್ನು ನೇಮಿಸಿಕೊಂಡಿದ್ದನು.

ಅದರಂತೆ ಭೋಜರಾಜನ ಗ್ರಂಥಾಲಯವೂ ಖ್ಯಾತಿವೆತ್ತ ಗ್ರಂಥಾಲಯವಾಗಿತ್ತು.

ಇವೆಲ್ಲ ಐತಿಹಾಸಿಕ ಸಂಗತಿಗಳಿಂದ ಭರತಖಂಡದಲ್ಲಿ ಅಲ್ಲಲ್ಲಿಯ ಆಳರಸರು, ಅವರ ಮಾಂಡಲಿಕರು, ಸರದಾರರು, ವಿದ್ವನ್ಮಣಿಗಳು, ಸಾರ್ವಜನಿಕ ಹಾಗೂ ವೈಯಕ್ತಿಕ ಗ್ರಂಥಾಲಯುಗಳನ್ನು ಬೆಳೆಯಿಸಿದ್ದರೆಂದು ನಾವು ಸಹಜವಾಗಿ ಊಹಿಸಬಹುದಾಗಿದೆ.

**ಬ ಮಧ್ಯಯುಗ:**

೧೨ನೇ ಹಾಗೂ ೧೩ನೇ ಶತಮಾನಗಳಲ್ಲಿ ನಾಯವ್ಯ-

ದಿಂದ ನಮ್ಮ ನಾಡಿನ ಮೇಲಾದ ಅವ್ಯಾಹತವಾದ ದಾಳಿಗಳ ಪರಿಣಾಮವಾಗಿ ನಾಡಿನಲ್ಲಿ ಕತ್ತಲೆ ಕವಿದಂತಾಯ್ತು. ದಾಳಿಗಾರರು ಸತತ ಪರಿಶ್ರಮದಿಂದ ಕಟ್ಟಿದ ಗುಡಿ-ಗುಂಡಾರ-ಗಳನ್ನೂ, ರಾಜಭವನಗಳನ್ನೂ, ಗ್ರಂಥಸಂಗ್ರಹಗಳನ್ನೂ ಸೂರೆಗೊಂಡರು.

ಕಾಲಾನಂತರ ದಾಳಿಗಾರರಲ್ಲಿ ಇಲ್ಲಿಯೇ ಉಳಿದು-ಕೊಂಡು ರಾಜ್ಯ ಕಟ್ಟಬೇಕೆಂಬ ಹೆಬ್ಬಯಕೆ ಉದಯಿಸಿತು. ಅವರು, ತಾವು ಗೆದ್ದ ನಾಡಿನ ಜನರಲ್ಲಿ ಸಹಾನುಭೂತಿಯನ್ನೂ, ತಾಳ್ಮೆಯನ್ನೂ, ಆದರವನ್ನೂ ತಾಳಿದವರಾದಂತೆ ದೇಶದಲ್ಲಿ ಮತ್ತೆ ಶಾಂತ ವಾತಾವರಣ ಮೂಡಿತು. ಅಂತೆಯೇ ಫಿರೋಜ ತಘಲಕ ಮೊದಲಾದ ಮುಹಮ್ಮದೀಯ ಅರಸರು ಅನೇಕ ಶಾಲೆ ಕಾಲೇಜುಗಳನ್ನು ಕಟ್ಟಿದರು. ಅದರಂತೆಯೇ ಗ್ರಂಥಾಲಯಗಳನ್ನೂ ಕಟ್ಟಿದರು. ಸಂಸ್ಕೃತ ಗ್ರಂಥಗಳನ್ನು ಅರಬ್ಬೀ ಭಾಷೆಯಲ್ಲಿ ಪರಿವರ್ತಿಸಿದರು. ನಾಗರಕೋಟೆ ಎಂಬ ಊರನ್ನು ಸೂರೆಗೊಳ್ಳುವಾಗ ಅಲ್ಲಿಯ ಒಂದು ದೇವಾಲಯದಲ್ಲಿ ೧೩೦೦ ಹಿಂದೂ ಗ್ರಂಥಗಳಿವೆಯೆಂದು ಫಿರೋಜ ತಘಲಕನಿಗೆ ತಿಳಿದು ಬಂದ ಕೂಡಲೇ ಅವನು ಅವುಗಳನ್ನು ತನ್ನ ವಶಕ್ಕೆ ತೆಗೆದುಕೊಂಡು ಕಾಲಾನಂತರ ಭಾಷಾಂತರ ಮಾಡಿಸಿದನೆಂದು ಪ್ರತೀತಿಯಿದೆ.

ಬಹಮನಿ ರಾಜ್ಯದ ಬಾದಶಹನಾದ ಮುಹಮ್ಮದ-ಶಹನ (೧೪೬೩-೧೪೮೨) ಮಂತ್ರಿ ಮುಹಮ್ಮದ ಗವಾನನು

ಬೀದರದಲ್ಲಿ ಒಂದು ಕಾಲೇಜನ್ನು (ಮದರಸಾ) ಸ್ಥಾಪಿಸಿದ್ದನೆಂದೂ, ಈ ಕಾಲೇಜು ಒಳ್ಳೆಯ ಗ್ರಂಥಾಲಯವನ್ನು ಕಟ್ಟಿಕೊಂಡಿತ್ತೆಂದೂ ಪ್ರತೀತಿಯಿದೆ.

## ಮೊಗಲರು

ಮೊಗಲರ ಆಳಿಕೆ ದೇಶಕ್ಕೆ ಒಂದು ತೆರನಾದ ಸ್ಥಿರತೆಯನ್ನು, ನೆಮ್ಮದಿಯನ್ನು, ಶಾಂತಿಯನ್ನು ತಂದುಕೊಟ್ಟಿತು. ಸ್ವತಃ ಸಂಸ್ಕೃತಿಪ್ರಿಯರೂ, ಕಲಾಕೌಶಲ್ಯಗಳ ಆರಾಧಕರೂ, ಸಾಹಿತ್ಯದೇವಿಯ ಸೇವಕರೂ ಆದ ಮೊಗಲ ಅರಸರು, ಗ್ರಂಥಾಲಯಗಳನ್ನು ಕಟ್ಟುವಲ್ಲಿ, ಗ್ರಂಥಗಳನ್ನು ಬರೆಯಿಸುವಲ್ಲಿ, ವಿಶೇಷವಾದ ಆಸ್ಥೆಯನ್ನೂ, ಕುತೂಹಲವನ್ನೂ ವ್ಯಕ್ತಪಡಿಸಿದರು.

"ರಣರಂಗಧೀರ"ನೆಂದು ಹೆಸರು ಪಡೆದ ಬಾಬರನು ದೊಡ್ಡ ಸಾಹಿತಿಯೂ, ಕವಿಯೂ ಆಗಿದ್ದನು. ತನ್ನ ಆಳಿಕೆಯ ನಾಲ್ಕೇ ವರ್ಷಗಳಲ್ಲಿ ಅವನು ಅನೇಕ ಶಾಲೆ-ಕಾಲೇಜುಗಳನ್ನು ಸ್ಥಾಪಿಸಲು ಹಾಗೂ ಅವುಗಳನ್ನು ಗ್ರಂಥಾಲಯಗಳಿಂದ ಸಜ್ಜುಗೊಳಿಸಲು ಪ್ರಯತ್ನ ಪಟ್ಟನು. ಅರಮನೆಯ ಗ್ರಂಥಾಲಯದ ಅಸ್ತಿವಾರವನ್ನು ಅವನೇ ಪರಿಶ್ರಮಪಟ್ಟು ಹಾಕಿದನು.

"ಕರುಣಾಳು"ವಾದ ಹುಮಾಯೂನ ಬಾದಶಹನು ತನ್ನ ಗ್ರಂಥಾಲಯದಿಂದ ಅನೇಕ ಗ್ರಂಥಗಳನ್ನು ಯುದ್ಧರಂಗಗಳಿಗೆ ಹೋಗುವಾಗ ಸಹಿತ ಸಂಗಡ ತೆಗೆದುಕೊಂಡು

ಒಯ್ಯುತ್ತಿದ್ದನೆಂಬ ಮಾತು ಅವನ ಗ್ರಂಥವ್ಯಾಸಂಗ ಪ್ರಿಯತೆಯ ದ್ಯೋತಕವಾಗಿದೆ.

"ಘನವಂತ" ಅಕಬರ ಬಾದಶಹನು ವಿದ್ವಾಂಸರುಗಳಿಗೆ ಪ್ರೋತ್ಸಾಹವೀಯುತ್ತಿದ್ದನು. ಅವನ ಆಳಿಕೆಯಲ್ಲಿ ಅರಮನೆಯ ಗ್ರಂಥಾಲಯವು ಬಹುಮುಖವಾಗಿ ಬೆಳೆಯಿತು. ಗ್ರಂಥಾಲಯದ ಭಾಗವಾಗಿ ಅಕಬರನು ಭಾಷಾಂತರ ವಿಭಾಗವೊಂದನ್ನು ತೆರೆದನು.

ಈ ವಿಭಾಗವು ಅದೆಷ್ಟೋ ಸಂಸ್ಕೃತ ಹಾಗೂ ಪರ್ಶಿಯನ್ ಗ್ರಂಥಗಳ ಸುಂದರವಾದ ಕೈಬರಹಗಳ ಭಾಷಾಂತರಗಳನ್ನು ಹೊರಡಿಸಿತು. ಬದೌನಿಯ ರಾಮಾಯಣ, ಅಥರ್ವವೇದ, ಹಾಗೂ ಮಹಾಭಾರತಗಳ ಭಾಷಾಂತರಗಳು ಅರಮನೆಯ ಗ್ರಂಥಾಲಯದ ಬೀರುಗಳಲ್ಲಿ ಕಂಗೊಳಿಸುತ್ತಿದ್ದವು.

ಆಗ್ರಾದ ಕಿಲ್ಲೆಯಲ್ಲಿ ಕೂಡ ಅಕಬರನು ಒಂದು ಗ್ರಂಥಾಲಯವನ್ನು ಸ್ಥಾಪಿಸಿದ್ದನು. ಈ ಗ್ರಂಥಾಲಯದಲ್ಲಿ ೭ ಲಕ್ಷ ಪೌಂಡು ಬೆಲೆಯುಳ್ಳ ೨೪ ಸಾವಿರ ಗ್ರಂಥಗಳಿದ್ದವು. ಈ ಸಂಗ್ರಹವು ಕವಿತೆ, ಆಯುರ್ವೇದ, ಜ್ಯೋತಿಷ್ಯ, ಸಂಗೀತ, ತತ್ವಜ್ಞಾನ, ಖಗೋಳಶಾಸ್ತ್ರ, ಭೂಮಿತಿ ಮುಂತಾದ ವಿಭಾಗಗಳಲ್ಲಿ ವರ್ಗೀಕರಿಸಲ್ಪಟ್ಟಿದ್ದಿತು.

"ವಿಲಾಸಪ್ರಿಯ"ನಾದ ಜಹಾಂಗೀರನು ಪುಸ್ತಕಗಳಲ್ಲಿಯೂ ಸೊಗಸನ್ನು ಕಂಡುಕೊಂಡನು. ಉಯಿಲು ಮಾಡದೆ ಮಡಿದ

ಮಹನೀಯರ ಆಸ್ತಿಯನ್ನು, ಶಾಲೆ-ಕಾಲೇಜುಗಳ ಹಾಗೂ ಗ್ರಂಥಾಲಯಗಳ ಸ್ಥಾಪನೆಗೋಸ್ಕರ ವಿನಿಯೋಗಿಸಬೇಕೆಂದು ಅವನು ಕಟ್ಟಪ್ಪಣೆ ಮಾಡಿದ್ದನು. ಅರಮನೆಯ ಗ್ರಂಥಾಲಯವನ್ನು ನೋಡಿಕೊಳ್ಳಲು ಬಹುಸಂಖ್ಯೆಯ ಸಿಬ್ಬಂದಿಯನ್ನು ನೇಮಿಸಿದನು. ಮಹತ್ವದ ಗ್ರಂಥಗಳನ್ನು ಕೊಳ್ಳುವದರಲ್ಲಿ ಅವನು ಹಣವನ್ನು ಸೂರೆಗೊಂಡನು. "ಯುಸುಫ ವ ಝುಲೇಖಾ" ಎಂಬ ಗ್ರಂಥದ ಒಂದು ಪ್ರತಿಗೆ ಅವನು ಒಂದು ಸಾವಿರ ಹೊನ್ನಿನ ಮೊಹರುಗಳನ್ನು ಕೊಟ್ಟನಂತೆ. ಅವನ ಪ್ರೇಯಸಿ ನೂರಜಹಾನಳು ಕೂಡ ಗ್ರಂಥಪ್ರಿಯಳಾಗಿದ್ದಳು. ಮಿರ್ಝಾ ಕಾಮರಾನನು ಬರೆದ "ದಿವಾನ" ಎಂಬ ಗ್ರಂಥದ ಒಂದು ಪ್ರತಿಯನ್ನು ಅವಳು ೩ ಬಂಗಾರದ ಮೊಹರುಗಳಿಗೆ ಕೊಂಡಳಂತೆ. ಈ ಗ್ರಂಥ ಇಂದು ಪಾಟ್ನಾದ ಖುದಾಬಕ್ಷ ಗ್ರಂಥಾಲಯದಲ್ಲಿದೆ.

ತನ್ನ ಪೂರ್ವಜರು ನಡೆದ ಈ ಉಜ್ವಲ ಹಾದಿಯಲ್ಲಿಯೇ ಶಹಾಜಹಾನನು ನಡೆದುಕೊಂಡು ಬಂದನು. ಅವನ ಹಸ್ತಾಕ್ಷರಗಳುಳ್ಳ ಅನೇಕ ಗ್ರಂಥಗಳು ಇಂದಿಗೂ ದೇಶದಲ್ಲಿಯ ಅಲ್ಲಲ್ಲಿಯ ಗ್ರಂಥಾಲಯಗಳಲ್ಲಿ ದೊರೆಯುತ್ತವೆ.

ಶಹಾಜಹಾನನ ಹಿರಿಯ ಮಗ ದಾರಾ, ಮೊಗಲ ಅರಸರಲ್ಲೇ ಘನವಾದ ವಿದ್ವಾಂಸ. ಅವನ ಮಾರ್ಗದರ್ಶನದಲ್ಲಿ ಸಂಸ್ಕೃತದಿಂದ ಪರ್ಶಿಯನ್ ಭಾಷೆಯಲ್ಲಿ ರೂಪಾಂತರ

ಗೊಂಡ ಅನೇಕ ಗ್ರಂಥಗಳಲ್ಲಿ ಉಪನಿಷತ್ತುಗಳ ಹಾಗೂ ಭಗವದ್ಗೀತೆಯ ಭಾಷಾಂತರಗಳು ಮಹತ್ವದವು.

ಕ್ರೂರನೆಂದೆನಿಸಿಕೊಂಡ ಔರಂಗಜೇಬನು ಕೂಡ ಪುಸ್ತಕಗಳನ್ನು ಕಲೆಹಾಕುತ್ತಿದ್ದನು.

ಮೊಗಲ ಅರಸರ ಅವನತಿಯೊಂದಿಗೆ ಅವರು ಕಟ್ಟಿದ ಗ್ರಂಥಾಲಯಗಳೂ ನಿರ್ನಾಮವಾದವು. ೧೭೩೯ರಲ್ಲಿ ನಾದಿರಶಹನು ದಿಲ್ಲಿಯ ಮೇಲೆ ದಾಳಿಮಾಡಿ ಅಲ್ಲಿಯ ಇತರ ಸಂಪತ್ತಿನೊಂದಿಗೆ ಗ್ರಂಥಸಂಪತ್ತಿಯನ್ನೂ ದೋಚಿಕೊಂಡು ತನ್ನ ದೇಶಕ್ಕೆ ಕೊಂಡೊಯ್ದನು.

**ದಕ್ಷಿಣದಲ್ಲಿ**

ಇತ್ತ ಮೈಸೂರಿನಲ್ಲಿ ಟೀಪ್ಪೂಸುಲ್ತಾನನೂ ಒಂದು ಒಳ್ಳೆಯ ಗ್ರಂಥಸಂಗ್ರಹವನ್ನು ಕಟ್ಟಿದ್ದನು. ೧೭೯೯ ರಲ್ಲಿ ಶ್ರೀರಂಗಪಟ್ಟಣದ ಪತನದ ನಂತರ ಅವನ ಈ ಗ್ರಂಥಸಂಗ್ರಹವು ಮಾರ್ಕ್ವಿಸ್ ವೆಲ್ಲೆಸ್ಲಿಯ ಆಜ್ಞೆಯ ಮೇರೆಗೆ ೧೮೦೦ ರಲ್ಲಿ ಕಲಕತ್ತೆಯಲ್ಲಿ ಸ್ಥಾಪಿತವಾದ ಕಾಲೇಜಿಗೆ ಒಯ್ಯಲ್ಪಟ್ಟಿತು. ಇದರಲ್ಲಿಯ ಅನೇಕ ಬೆಲೆಯುಳ್ಳ ಹಸ್ತಪ್ರತಿಗಳನ್ನು ಆಕ್ಸಫರ್ಡ ಹಾಗೂ ಕೇಂಬ್ರಿಜ್ ವಿಶ್ವವಿದ್ಯಾಲಯಗಳ ಗ್ರಂಥಾಲಯಗಳಿಗೆ ಕಳಿಸಲಾಯಿತು. ೨೦೦೦ ಸಂಖ್ಯೆಯುಳ್ಳ ಈ ಸಂಗ್ರಹ ಹೆಚ್ಚಾಗಿ ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ್ದಿತು.

ಮರಾಠರ ಅಭ್ಯುದಯದ ಕಾಲದಲ್ಲಿ ಗ್ರಂಥಾಲಯಗಳು ಮತ್ತೆ ತಲೆದೋರಿದವು. ಇಷ್ಟರಲ್ಲಿ ಮುದ್ರಣ ಕಲೆಯೂ ಭಾರತದಲ್ಲಿ ಕಾಲಿಟ್ಟಿದ್ದಿತು. ಹೀಗಾಗಿ ಗ್ರಂಥಗಳ ರಚನೆಗೆ ಹೆಚ್ಚು ಚಾಲನೆ ದೊರೆತಂತಾಗಿತ್ತು. ಆದರೆ ದೇಶದಲ್ಲಿಯ ಅಸ್ಥಿರ, ಅಶಾಂತ ವಾತಾವರಣದಲ್ಲಿ ಶಾಂತಿ ಕಾಲದಲ್ಲಿ ಅಭಿವೃದ್ಧಿ ಹೊಂದುವ ಕಲೆಗಳಾಗಲೀ, ಸಾಹಿತ್ಯವಾಗಲೀ ಪ್ರಗತಿ ಹೊಂದುವದು ಸಾಧ್ಯವಿರಲಿಲ್ಲ.

## ಅಮೂಲ್ಯ ಹಸ್ತಪ್ರತಿಗಳ ಗ್ರಂಥಾಲಯಗಳು

ಮುದ್ರಿತ ಗ್ರಂಥಗಳ ಸಂಗ್ರಹಗಳ ಇತಿಹಾಸವನ್ನು ಪ್ರಾರಂಭಿಸುವ ಮುನ್ನ, ಇಡೀ ಭಾರತದಲ್ಲಿಯೇ ಹಸ್ತಲಿಖಿತ ಗ್ರಂಥಗಳ ಸಂಗ್ರಹಕ್ಕಾಗಿ ಖ್ಯಾತಿವೆತ್ತ ತಂಜಾವೂರಿನ ಸರಸ್ವತೀ ಮಹಾಲ ಗ್ರಂಥಾಲಯ ಹಾಗೂ ಪಾಟ್ನಾದ ಖುದಾಬಕ್ಷ ಗ್ರಂಥಾಲಯ, ಇವುಗಳ ಬಗ್ಗೆ ಉಲ್ಲೇಖಿಸುವದು ಅವಶ್ಯವಿದೆ.

## ಸರಸ್ವತೀ ಮಹಾಲ ಗ್ರಂಥಾಲಯ

ತಂಜಾವೂರಿನಲ್ಲಿನ ಈ ಗ್ರಂಥಾಲಯ ಉಗಮವಾದದ್ದು ೧೬ನೇ ಶತಮಾನದಲ್ಲಿ. ಆ ಕಾಲದಲ್ಲಿ ಇಲ್ಲಿ ರಾಜ್ಯವಾಳುತ್ತಿದ್ದ ತೆಲುಗು ನಾಯಕರು ಅನೇಕ ತೆಲುಗು ಹಸ್ತಲಿಖಿತ ಗ್ರಂಥಗಳನ್ನು ಸಂಗ್ರಹಿಸಿದ್ದರು. ೧೮ ನೇ ಶತಮಾನದಲ್ಲಿ ಈ ಭಾಗವನ್ನು ಗೆದ್ದುಕೊಂಡು ಆಳತೊಡಗಿದ ಮರಾಠರು

ಕೂಡ ಅನೇಕ ಸಂಸ್ಕೃತ ಹಸ್ತಪ್ರತಿಗಳನ್ನು ಸಂಗ್ರಹಿಸಿ ಇಲ್ಲಿಯ ಗ್ರಂಥಸಂಗ್ರಹವನ್ನು ವೃದ್ಧಿಪಡಿಸಿದರು. ಆದರೆ ಸಂಗ್ರಹ ಬಹುಮಟ್ಟಿಗೆ ವೃದ್ಧಿಗೊಂಡದ್ದು ೧೮೨೦-೩೦ರ ಅವಧಿಯಲ್ಲಿ. ಈ ಸಮಯದಲ್ಲಿ ಸರ್ಫೋಜಿಯವರು ಬನಾರಸಕ್ಕೆ ಭೇಟಿ ಇತ್ತು ಅನೇಕ ಸಂಸ್ಕೃತ ಗ್ರಂಥಗಳನ್ನು ಕೊಂಡು ತಂದು ಈ ಸಂಗ್ರಹಕ್ಕೆ ಸೇರಿಸಿದರು. ಇಂದಿಗೆ ಇಲ್ಲಿ ೩೦ ಸಾವಿರಕ್ಕೂ ಮೇಲ್ಪಟ್ಟು ಅಮೂಲ್ಯವಾದ ತಾಡೋಲೆಯ ಹಸ್ತಪ್ರತಿಗಳಿವೆ. ಇದಲ್ಲದೆ ಅನೇಕ ಮುದ್ರಿತ ಗ್ರಂಥಗಳಿವೆ. ೧೮೭೩ ರಲ್ಲಿ ಈ ಸಂಗ್ರಹದ ಸೂಚಿಯನ್ನು ತಯಾರಿಸುವ ಕೆಲಸ ಕೈಕೊಂಡಿದ್ದ ಡಾ. ಬರ್ನೆಲ್ಲರು ಇಂಥ ಸಂಗ್ರಹವನ್ನು ೫೦ ಸಾವಿರ ಪೌಂಡು ವೆಚ್ಚ ಮಾಡಿದರೂ ಸಂಗ್ರಹಿಸಲಸಾಧ್ಯ ಎಂದು ಹೇಳಿದ್ದಾರೆ.

## ಖುದಾಬಕ್ಷ ಪ್ರಾಚ್ಯ ಸಾರ್ವಜನಿಕ ಗ್ರಂಥಾಲಯ

ಖುದಾಬಕ್ಷ ಮನೆತನದವರಿಂದ ೧೯ ನೇ ಶತಮಾನದ ಆದಿಯಿಂದ ಸಂಗ್ರಹಿಸಲ್ಪಟ್ಟ ಈ ಅಮೂಲ್ಯವಾದ ಹಸ್ತಲಿಖಿತ ಹಾಗೂ ಮುದ್ರಿತ ಗ್ರಂಥಗಳ ಸಂಗ್ರಹ, ೧೮೯೧ ರಲ್ಲಿ ೮೦ಸಾವಿರ ರೂಪಾಯಿ ಬೆಲೆಯುಳ್ಳ ಭವ್ಯ ಭವನದಲ್ಲಿಡಲ್ಪಟ್ಟು, ಖಾನ ಬಹಾದ್ದೂರ ಖುದಾಬಕ್ಷರಿಂದ ಸಾರ್ವಜನಿಕರ ಉಪಯೋಗಕ್ಕಾಗಿ ತೆರೆದಿಡಲ್ಪಟ್ಟಿತು. ಮೊಗಲರ ಅವನತಿಯ ನಂತರ ಅವರ ಅತ್ಯದ್ಭುತವಾದ

ಅರಮನೆಯ ಗ್ರಂಥಾಲಯವನ್ನು ದೇಶದಲ್ಲಿಯ ಅನೇಕ ಮಾಂಡಲಿಕರು ಹರಿದು ಹಂಚಿಕೊಂಡು ಬಿಟ್ಟಿದ್ದರು. ಇನ್ನೂ ಕೆಲವನ್ನು ಇಂಗ್ಲೀಷರು ಕಡಿಮೆ ಬೆಲೆಗೆ ಕೊಂಡು-ಕೊಂಡು ಬ್ರಿಟನ್ನಿನ ಗ್ರಂಥಾಲಯಗಳಿಗೆ ಕಳಿಸಿಬಿಟ್ಟಿದ್ದರು. ಸಾಹಿತ್ಯ ಸಂಸ್ಕೃತಿಪ್ರಿಯರೂ, ಸ್ವತಃ ಶ್ರೇಷ್ಠ ವಿದ್ವಾಂಸರೂ ಆದ ಖುದಾಬಕ್ಷರು ಹಳೆಯ ಹಸ್ತಪ್ರತಿಗಳನ್ನು ಮಾರ ಬಂದವರಿಗೆ ಅವರ ಗಾಡಿ ಹಾಸಲಿನ ಇಮ್ಮಡಿಯಷ್ಟು ಹಣ ಕೊಟ್ಟು ಅವರು ತಂದ ಹಸ್ತಪ್ರತಿಗಳನ್ನು ಯೋಗ್ಯ ಬೆಲೆಗೆ ಕೊಂಡುಕೊಳ್ಳುತ್ತಿದ್ದರು. ಮತ್ತು ಇಂಥ ಅಮೂಲ್ಯ ಗ್ರಂಥಸಂಗ್ರಹಗಳಿರುವ ಸ್ಥಳಗಳನ್ನು ಕಂಡು ಹಿಡಿಯು-ವದರಲ್ಲಿ ಕುಶಲನೆಂದೆನಿಸಿಕೊಂಡ ಮಹಮ್ಮದ ಮಕ್ಕಿ ಎಂಬವ ನಿಗೆ ಪ್ರತಿ ತಿಂಗಳು ೫೦ ರೂಪಾಯಿ ವೇತನ ಕೊಟ್ಟು, ಪುರಾತನ ಗ್ರಂಥಗಳ ಹಾಗೂ ಹಸ್ತಪ್ರತಿಗಳ ಶೋಧನೆ, ಶೇಖರಣೆಯ ಕಾರ್ಯವನ್ನು ಒಪ್ಪಿಸಿ ಕೊಟ್ಟರು. ಮತ್ತು ಇಂಥ ಅಮೂಲ್ಯ ಸಂಗ್ರಹ ರಭಸದಿಂದ ಪರದೇಶಕ್ಕೆ ಹೋಗುವದನ್ನು ತಡೆ ಗಟ್ಟಿದರು.

ಇಂದಿಗೆ ಈ ಗ್ರಂಥಾಲಯದಲ್ಲಿ ಜಹಾಂಗೀರ ಬಾದಶಹನ ಜ್ಯೋತಿಷ್ಯ ಶಾಸ್ತ್ರದ ಗ್ರಂಥ ಇದೆ. ಆ ಗ್ರಂಥದುದ್ದಕ್ಕೂ ಬಾದಶಹನು ಸ್ವತಃ ತನ್ನ ಕೈಲಿ ಮಾಡಿದ ಟಿಪ್ಪಣಿ ಮಾರ್ಜಿನದಲ್ಲಿ ಶೋಭಿಸುತ್ತಿವೆ. ಔರಂಗಜೇಬನ ಪತ್ರಗಳನ್ನೊಳಗೊಂಡ ಇನಾಯತುಲ್ಲಾ ಖಾನನ ಗ್ರಂಥ 'ಅಹಕಮ್-ಇ-ಅಲಂಗೀರಿ'

ಇಲ್ಲಿದೆ. ಕ್ರಿ. ಶ. ೧೫೯೭ರ ರಲ್ಲಿ ಬರೆಯಲ್ಪಟ್ಟ 'ಶಹಾನ್‌ಶಹಾ
ನಾಮು' ಇಲ್ಲಿದೆ. ಇದನ್ನು ಶಹಾಜಹಾನನು ಕೇವಲ ರೂ. ೭೫೦
ಗಳಿಗೆ ಕೊಂಡನಂತೆ. ೧೦೦೦ ಬಂಗಾರದ ಮೊಹರಿ
ಜಹಾಂಗೀರ ಕೊಂಡುಕೊಂಡ, ಜಾಮಿ ಕವಿ ಬರೆದ
'ಯುಸುಫ ವ ಝುಲೈಖಾ' ಕವನದ ಪ್ರತಿ ಇಲ್ಲಿದೆ. ಈ
ಪ್ರತಿಯನ್ನು ಪರ್ಶಿಯನ್ ಹಸ್ತಲಿಪಿಕಾರರಲ್ಲಿ ಅತಿ ಶ್ರೇಷ್ಠ
ನೆನಿಸಿದ ಮೀರ ಅಲಿ ಬರೆದಿದ್ದಾನೆ. ಬಣ್ಣ ಬಣ್ಣದ ಚಿತ್ರ
ಗಳಿಂದೊಡಗೂಡಿದ ಪ್ರಸಿದ್ಧ ಹಸ್ತಲಿಖಿತ ಗ್ರಂಥಗಳಲ್ಲಿ
'ತೈಮೂರನ ವಂಶದ ಇತಿಹಾಸ', ರಣಜಿತಸಿಂಗಸಿಗಾಗಿ
ಬರೆಯಲ್ಪಟ್ಟ 'ಭಾರತ ಇತಿಹಾಸ', ಇವೆಲ್ಲ ಅಡಕವಾಗಿವೆ
ಇವಲ್ಲದೆ ಇನ್ನೂ ಅನೇಕ ಅಮೂಲ್ಯ ಹಸ್ತಲಿಖಿತ ಗ್ರಂಥಗಳಿವೆ
ಇಲ್ಲಿ. ಚೀನಾ, ಮಧ್ಯ ಏಶಿಯಾ, ಪರ್ಶಿಯಾ, ಇರಾಣ
ಮೊದಲಾದ ದೇಶಗಳ ಪ್ರಸಿದ್ಧ ಚಿತ್ರಕಾರರು ಬರೆದ ಬಣ್ಣ
ಚಿತ್ರಗಳು, ಭಾವಚಿತ್ರಗಳೂ ಇವೆ. ಸ್ಕಾಟ್‌ನ 'ವೇವ್ಹೇಲಿ
ಕಾದಂಬರಿಗಳ ಮೊಟ್ಟ ಮೊದಲಿನ ಆವೃತ್ತಿಯೂ ಇಲ್ಲಿದೆ
೧೯೦೩ ರಲ್ಲಿ ಈ ಗ್ರಂಥಾಲಯಕ್ಕೆ ಭೇಟಿಯಿತ್ತ ಕರ್ಝನ
ಇದೆಲ್ಲ ಐಸಿರಿ ನೋಡಿ ಈ ಕೆಳಗಿನಂತೆ ಉದ್ಗಾರ ತೆಗೆದಿದ್ದಾನೆ

"If there be on earth, an elysium of bliss
It is this, it is this, and oh it's this".

ಖುದಾಬಕ್ಷನನ್ನು ಭಾರತದ ಬಾಡ್ಲೆ ಎಂದು ಸಂಬೋ
ಧಿಸಿದ್ದು ಎಷ್ಟು ಸೂಚ್ಯ, ಸಮಂಜಸ, ಸಮರ್ಪಕವಾಗಿದೆ

## ೪ ಮುದ್ರಣ ಯುಗ

ಮುದ್ರಣ ಕಲೆ ಭಾರತಕ್ಕೆ ಬಂದದ್ದು ೧೫೫೬ ರಲ್ಲಿ ಎಂದು ಈ ಮೊದಲೇ ಹೇಳಿದೆಯಷ್ಟೇ. ಆ ವರ್ಷ ಸಪ್ಟಂಬರ ತಿಂಗಳಲ್ಲಿ, ಪೋರ್ತುಗೀಜ ಪಾದ್ರಿಗಳು ರಾಚೋಲ ಎಂಬಲ್ಲಿಯ 'ಸೆಂಟಪಾಲ್ ಕಾಲೇಜಿ'ನಲ್ಲಿ ಒಂದು ಮುದ್ರಣಾಲಯವನ್ನು ಪ್ರಾರಂಭಿಸಿದರು. ನವ್ಹಂಬರ ತಿಂಗಳೊಳಗಾಗಿ ಅವರು ಅಲ್ಲಿ 'Conclusoes Publicas' ಎಂಬ ಗ್ರಂಥವನ್ನು ಮುದ್ರಿಸಿ ಪ್ರಸಿದ್ಧಿಸಿದರು.

ಮುದ್ರಣಯುಗ ಆರಂಭವಾದಂದಿನಿಂದ ಮೊಟ್ಟ-ಮೊದಲು ಭಾರತದಲ್ಲಿ ಭಾರತೀಯ ಭಾಷೆಯಲ್ಲಿ ಅಚ್ಚಾದ, ಇಂದಿಗೂ ನೋಡಲು ದೊರೆಯುವ ಗ್ರಂಥವೆಂದರೆ ಮಲಬಾರಿ ತಮಿಳಿನಲ್ಲಿರುವ "ಕ್ರಿಸ್ತ್ಯವಣ್ಣ ಕಣಂ." ಈ ಗ್ರಂಥ ಮೊದಲ ಬಾರಿ ೧೫೭೭ರಲ್ಲಿ ಪ್ರಸಿದ್ಧವಾಯಿತು. ಇದರ ಪುನರ್ಮುದ್ರಣದ ಒಂದು ಪ್ರತಿಯು ಫ್ರಾನ್ಸದ (Bibliotheque Nationale) ರಾಷ್ಟ್ರೀಯ ಗ್ರಂಥಾಲಯದಲ್ಲಿದೆ.

ಮುದ್ರಣಾಲಯವನ್ನು ಸ್ಥಾಪಿಸಿದ ಪ್ರಥಮ ಭಾರತೀ-ಯನೆಂದರೆ ಶಿವಾಜಿ ಮಹಾರಾಜನು. ತಾನು ಸ್ಥಾಪಿಸಿದ ಮುದ್ರಣಾಲಯವನ್ನು ಚೆನ್ನಾಗಿ ನಡೆಸಿಕೊಂಡು ಹೋಗಲು ಆತನಿಗೆ ಯಾರೂ ದೊರೆಯದ್ದರಿಂದ ಶಿವಾಜಿಯು ೧೬೭೪ ರಲ್ಲಿ ಮುದ್ರಣಾಲಯವನ್ನು ಗುಜರಾತದ ಭೀಮಜಿ ಪಾರಖ ಎಂಬವನಿಗೆ ಮಾರಿ ಬಿಟ್ಟನು. ಭೀಮಜಿ ಪಾರಖ ಬಹು

ಸಾಹಸಿ; ಮುದ್ರಣಾಲಯವನ್ನು ನಡೆಸಲು ಇಂಗ್ಲೆಂಡಿನಿಂದ ಒಬ್ಬ ಮುದ್ರಣ ಕಲೆ ತಜ್ಞನನ್ನು ಕರೆಯಿಸಿಕೊಂಡನು.

## ಭಾರತೀಯ ಭಾಷೆಗಳಲ್ಲಿ ಗ್ರಂಥಗಳ ಮುದ್ರಣ:

### ಮಲೆಯಾಳಂ ಹಾಗೂ ತಮಿಳು

ಇಂತು ಮುದ್ರಣ ಕಲೆ ಭಾರತದಲ್ಲಿ ಬಂದು ನಿಲ್ಲು-ವಂತಾಯಿತು. ಕಾಲ ಗತಿಸಿದಂತೆ ಎಲ್ಲ ಭಾರತೀಯ ಭಾಷೆ-ಗಳಲ್ಲಿ ಗ್ರಂಥಗಳನ್ನು ಮುದ್ರಿಸುವ ಕಾರ್ಯ ಪ್ರಾರಂಭ-ವಾಯಿತು. ಈ ದಿಶೆಯಲ್ಲಿ ಮೊದಲಿಗರೆಂದರೆ ಮಲೆಯಾಳರು ಹಾಗೂ ತಮಿಳರು. ಮೇಲೆ ಉಲ್ಲೇಖಿಸಿದ "ಕ್ರಿಸ್ತ್ಯವಣ್ಣ ಕಣಂ" ಭಾರತೀಯ ಭಾಷೆಗಳಲ್ಲಿ ಅಚ್ಚಾದ ಮೊಟ್ಟ-ಮೊದಲನೆಯ ಪುಸ್ತಕ.

ಪ್ರಾರಂಭದಲ್ಲಿ ತಮಿಳು ಪುಸ್ತಕಗಳೆಲ್ಲ ಮಲೆಯಾಳಿ ಲಿಪಿಯಲ್ಲಿಯೇ ಅಚ್ಚಾಗುತ್ತಿದ್ದವು. ಈ ಲಿಪಿಯು ಬಹುಜನ ತಮಿಳರಿಗೆ ಅಪರಿಚಿತವಿದ್ದುದರಿಂದ ಇಗ್ನೇಸಿಯಸ್ ಐಕಾ-ಮೋನಿ ಎಂಬ ತಮಿಳನು, ತಮಿಳು ಲಿಪಿಯಲ್ಲಿಯೇ ಕಟ್ಟಿಗೆಯ ಮೇಲೆ ಅಚ್ಚಿನ ಮೊಳೆಗಳನ್ನು ತಯಾರಿಸಿದನು. ಈ ಮೊಳೆಗಳ ಸಹಾಯದಿಂದಲೇ 'ತಮಿಳು ಪೋರ್ತುಗೀಜ ನಿಘಂಟು' ತಯಾರಾಯಿತು. ೧೭೧೨ ರಲ್ಲಿ ಟ್ರಾಂಕ್ಯುಬಾರ ಎಂಬಲ್ಲಿ ಡೇನಿಶ್ ಪಾದ್ರಿಗಳು ಒಂದು ಮುದ್ರಣಾಲಯವನ್ನು ಸ್ಥಾಪಿಸಿದರು. ಮತ್ತು ಇಲ್ಲಿಯೇ "Apostle's creed"

ಎಂಬ ಗ್ರಂಥದ ತಮಿಳು ರೂಪಾಂತರವನ್ನು ಮುದ್ರಿಸಿ ಪ್ರಸಿದ್ಧಿಸಿದರು.

**ಬಂಗಾಲಿ**

೧೭೭೮ ರಲ್ಲಿ ಚಾರ್ಲಸ್ ವಿಲ್‌ಕಿನ್ಸ್ ಬಂಗಾಲಿ ಲಿಪಿಯಲ್ಲಿ ಅಚ್ಚು ಮೊಳೆಗಳನ್ನು ತಯಾರಿಸಿ ಹಾಲ್‌ಹೆಡ್‌ನು ಬರೆದ "Grammar of the Bengali Language" ಎಂಬ ಗ್ರಂಥವನ್ನು ಮುದ್ರಿಸಿದನು. ಬಂಗಾಲಿ ಅಚ್ಚುಗಳ ಪ್ರಯೋಗ ಮೊದಲ ಬಾರಿ ಆದದ್ದು ಈ ಗ್ರಂಥದಲ್ಲಿಯೇ.

೧೮೦೦ರ ಸುಮಾರಿಗೆ ಡಾ. ವಿಲಿಯಮ್ ಕ್ಯಾರಿ ಎಂಬವನು ಸಿರಾಂಪುರದಲ್ಲಿ ಒಂದು ಮುದ್ರಣಾಲಯವನ್ನು ಸ್ಥಾಪಿಸಿದನು. ೧೮೦೧ ರಿಂದ ೧೮೩೨ ರ ವರೆಗೆ ಈ ಮುದ್ರಣಾಲಯವು ೨ ಲಕ್ಷ ೧೨ ಸಾವಿರಕ್ಕೂ ಮೇಲ್ಪಟ್ಟ ಗ್ರಂಥಗಳನ್ನು, ೪೦ ಬೇರೆ ಬೇರೆ ಭಾಷೆಗಳಲ್ಲಿ ಪ್ರಸಿದ್ಧಪಡಿಸಿತು. ವಿಲಿಯಮ್ ಕ್ಯಾರಿ ಇಷ್ಟಕ್ಕೇ ತೃಪ್ತನಾಗಲಿಲ್ಲ. ದೇಶೀ ಭಾಷೆಗಳಲ್ಲಿ ಅಚ್ಚು ಮೊಳೆ ತಯಾರುಮಾಡುತ್ತಿದ್ದ ಪಂಚಾನನ ಎಂಬ ಭಾರತೀಯನ ನೆರವಿನಿಂದ ಎಲ್ಲ ಪ್ರಾಚ್ಯ ಭಾಷೆಗಳಲ್ಲಿ ಅಚ್ಚುಮೊಳೆಗಳನ್ನು ತಯಾರಿಸಿ ಮಾರಾಟ ಮಾಡತೊಡಗಿದನು.

**ಮರಾಠಿ**

ಮರಾಠಿ ಹಾಗೂ ಆಸಾಮಿ ಭಾಷೆಗಳಲ್ಲಿಯ ಮೊಟ್ಟಮೊದಲಿನ ಪುಸ್ತಕಗಳು ಸಿರಾಂಪುರ ಮುದ್ರಣಾಲಯದಲ್ಲಿಯೇ

ಅಚ್ಚಾದವು. ೧೮೦೭ ರಲ್ಲಿ 'ಮರಾಠಿ ಬೈಬಲ್ಲು', ೧೮೧೦ ರಲ್ಲಿ 'ಮರಾಠಿ–ಇಂಗ್ಲಿಷ ನಿಘಂಟು' ಹೀಗೆ ಇವೆರಡೂ ಇಲ್ಲಿಯೇ ಅಚ್ಚಾದವು.

## ಗುಜರಾತಿ

ಗುಜರಾತಿ ಅಚ್ಚುಗಳು ಮೊದಲ ಬಾರಿಗೆ ತಯಾರಾದುದು ೧೭೯೭ ರಲ್ಲಿ. "Bombay Courier" ಎಂಬ ವರ್ತಮಾನ ಪತ್ರದ ಛಾಪಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಬೈರಾಮಜಿ ಜೀಜಿಭಾಯ್ ಛಾಪಗಾರ, ಇವರು ಆ ವರ್ತಮಾನ ಪತ್ರದಲ್ಲಿ ಜಾಹೀರಾತು ಹಾಕುವದಕ್ಕೋಸ್ಕರ ಗುಜರಾತಿ ಅಚ್ಚುಗಳನ್ನು ತಯಾರಿಸಿದರು

## ಕನ್ನಡ

ಕನ್ನಡ ಅಚ್ಚುಗಳನ್ನು ಮೊದಲ ಸಲ ಉಪಯೋಗಿಸಿದ ಗ್ರಂಥವೆಂದರೆ ಸಿರಾಂಪುರದಲ್ಲಿ ೧೮೧೭ ರಲ್ಲಿ ಅಚ್ಚಾದ ಡಾ. ವಿಲಿಯಂ ಕ್ಯಾರಿ ಅವರ "Grammar of the Kurnata Language" ಎಂಬುದು.

ಕನ್ನಡ ಅಚ್ಚುಗಳನ್ನು ಎರಡನೆಯದಾಗಿ ಉಪಯೋಗಿಸಿದ ಪುಸ್ತಕವೆಂದರೆ ಜಾನ ಮೆಕೆರೆಲ್ ಎಂಬವರು ಬರೆದ "Grammar of the Carnataca Language" ಎಂಬುದು. ಇದು ೧೮೨೦ ರಲ್ಲಿ ಮದ್ರಾಸದಲ್ಲಿ ಅಚ್ಚಾಯಿತು. ಕನ್ನಡ-

ದಲ್ಲಿ ಮೊಟ್ಟಮೊದಲಿನ ಪ್ರಾಥಮಿಕ ಪಠ್ಯಪುಸ್ತಕಗಳು ಅಚ್ಚಾದುದು ಮುಂಬೈಯಲ್ಲಿಯ "Education Society's Printing Press" ಎಂಬಲ್ಲಿ. ಮುಂದೆ ಧಾರವಾಡದ ಜ್ಞಾನವರ್ಧಕ ಪ್ರೆಸ್, ಕರ್ನಾಟಕ ಬುಕ್‌ಡಿಪೋ ಪ್ರೆಸ್, ಬೆಳಗಾಂವಿಯ ರಾಮತತ್ವ ಪ್ರಕಾಶ ಪ್ರೆಸ್, ಹಾಗೂ ಮಂಗಳೂರಿನ ಬಾಸೆಲ್ ಮಿಶನ್ ಪ್ರೆಸ್, ಇವೆಲ್ಲ ಸ್ಥಾಪಿತ ವಾಗಿ ಕನ್ನಡದಲ್ಲಿ ಗ್ರಂಥಗಳು ಹೆಚ್ಚಿನ ಪ್ರಮಾಣದಲ್ಲಿ ಅಚ್ಚಾಗತೊಡಗಿದವು.

ಇಂತು ಎಲ್ಲ ಭಾರತೀಯ ಭಾಷೆಗಳಲ್ಲಿ ಗ್ರಂಥಗಳು ಅಚ್ಚಾಗ ತೊಡಗಿ ಭಾರತದ ಗ್ರಂಥಾಲಯ ಪ್ರಸಾರದ ಇತಿಹಾಸದಲ್ಲಿ ಒಂದು ಹೊಸ ಪುಟವನ್ನೇ ತೆರೆದವು.



## ೫ ಗ್ರಂಥಾಲಯ ಚಳವಳಿ

### ಹತ್ತೊಂಬತ್ತನೆಯ ಶತಮಾನ

ಸಾಮಾನ್ಯವಾಗಿ ರಾಜಕೀಯದಲ್ಲಿ ೧೯ನೇ ಶತಮಾನ ಆಶಾಶತಕವೆಂದು ಬಣ್ಣಿಸಲ್ಪಟ್ಟರೂ ಭಾರತಕ್ಕೆ ಮಾತ್ರ ಅಮಂಗಳವೆಂದೇನೋ ತೋರಿತು. ಆದರೆ ಸಾಂಸ್ಕೃತಿಕ ಹಾಗೂ ಆಧ್ಯಾತ್ಮಿಕ ದೃಷ್ಟಿಯಿಂದ ನೋಡಿದರೆ ಅದು ಶ್ರೀಮಂತವಾಗಿತ್ತೇನೋ. ಏಕೆಂದರೆ ಬಾಳಗಂಗಾಧರ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಟಿಳಕ, ಮಹಾತ್ಮಾ ಗಾಂಧಿ, ಇಂಥ ಪುಣ್ಯ ಜೀವಿಗಳನ್ನು ಭಾರತಕ್ಕಿತ್ತ ಶತಕ ಇದೇ ಅಲ್ಲವೆ? ಇಂದಿನ ಶಾಲೆಕಾಲೇಜುಗಳ ಶಿಕ್ಷಣ ಪದ್ಧತಿಯು ಪ್ರಾರಂಭವಾದದ್ದು ಇದೇ ಶತಕದಲ್ಲಿ. ಅದರಂತೆಯೇ ಗ್ರಂಥಾಲಯ ಚಳವಳಿಯು ಉಗಮವಾದದ್ದೂ ಇದೇ ಶತಕದಲ್ಲಿಯೇ.

ತನ್ನ ಅಧಿಕಾರವನ್ನು ಸ್ಥಿರಗೊಳಿಸಿಕೊಂಡ ಈಸ್ಟ ಇಂಡಿಯಾ ಕಂಪನಿಯು (East India Company), ರಾಜ್ಯದಾಡಳಿತವನ್ನು ಸುಗಮವಾಗಿ ಸಾಗಿಸಿಕೊಂಡು ಹೋಗುವ ಹಾಗೂ ತನ್ನ ಸಹಸ್ರಾರು ಕಚೇರಿಗಳಿಗಾಗಿ ಕಾರಕೂನರನ್ನು ತರಬೇತಿಗೊಳಿಸುವ ಉದ್ದೇಶದಿಂದ ಭಾರತೀಯರಿಗೆ ಇಂಗ್ಲೀಷ ಭಾಷೆಯನ್ನು ಕಲಿಸುವದಕ್ಕೆಂದು

ಅಲ್ಲಲ್ಲಿ ಶಾಲೆಗಳನ್ನು ತೆರೆಯಿತು. ಶಾಲೆಯ ಶಿಕ್ಷಣ ಪೂರೈಸಿದವರ ಸಲುವಾಗಿ ಕಾಲೇಜುಗಳು, ವಿಶ್ವವಿದ್ಯಾಲಯಗಳು ಹುಟ್ಟಿಬಂದವು. ಶೈಕ್ಷಣಿಕ ಪ್ರಗತಿಯಾದಂತೆ, ಸುಶಿಕ್ಷಿತರಲ್ಲಿ ವಾಚನಾಭಿರುಚಿ ಹೆಚ್ಚಿ ಭಾರತದ ವಿವಿಧ ಭಾಷೆಗಳಲ್ಲಿ ನಿಯತಕಾಲಿಕೆಗಳು ಪ್ರಕಟವಾಗುವಂತಾಯಿತು. ಅದರ ಜೊತೆಗೆ ಗ್ರಂಥಗಳ ಪ್ರಕಟನೆಗೂ ಪುಟ ದೊರೆತಂತಾಯಿತು.

## ನೇಟಿವ್ಹ್ ಜನರಲ್ ಲೈಬ್ರರಿಗಳು

ಆಯಾ ಜಿಲ್ಹೆಗಳಲ್ಲಿ ಕೆಲಸ ಮಾಡುತ್ತಿದ್ದ ಇಂಗ್ಲೀಷ ಅಧಿಕಾರಿಗಳು ತಮ್ಮ ಸ್ವಂತದ ಹಾಗೂ ತಮ್ಮ ಕೈಯಲ್ಲಿ ಕೆಲಸ ಮಾಡುತ್ತಿದ್ದ ಇನ್ನುಳಿದ ನೌಕರರ ಉಪಯೋಗಕ್ಕಾಗಿ ಗ್ರಂಥಾಲಯಗಳನ್ನು ಸ್ಥಾಪಿಸಿ ಗ್ರಂಥಾಲಯ ಚಳವಳಿಯನ್ನು ಪ್ರಾರಂಭಿಸಿದರು. ಈ ಪ್ರಾರಂಭದ ಗ್ರಂಥಾಲಯಗಳೇ "ನೇಟಿವ್ಹ ಜನರಲ್ ಲೈಬ್ರರಿ"ಗಳು (Native General Library). ಉದಾಹರಣೆಗಾಗಿ ತ್ರಿವೇಂದ್ರಂ (೧೮೨೯), ಬೆಳಗಾವಿ (೧೮೪೮), ಕೊಲ್ಹಾಪುರ (೧೮೫೦), ಧಾರವಾಡ (೧೮೫೪), ಹೀಗೆ ಇನ್ನೂ ಅನೇಕಾನೇಕ ಮಹತ್ವದ ಪಟ್ಟಣಗಳಲ್ಲಿ ಇಂಥ ಗ್ರಂಥಾಲಯಗಳು ಸ್ಥಾಪಿಸಲ್ಪಟ್ಟವು.

ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೆಂದೆನಿಸಿಕೊಂಡ ೧೮೫೭ ರ ಸಮರದ ಇಳಿತರದಲ್ಲಿಯೇ ಮುಂಬೈ,

ಮದ್ರಾಸ ಮತ್ತು ಕಲಕತ್ತೆಯ ವಿಶ್ವವಿದ್ಯಾಲಯಗಳು ಮೂಡಿ ಬಂದವು. ಇದರಿಂದ ಶಿಕ್ಷಣ ಪ್ರಸಾರಕ್ಕೆ ಉತ್ತೇಜನ ದೊರೆತು ಸುಶಿಕ್ಷಿತರ, ಸಾಕ್ಷರಿಗಳ ಸಂಖ್ಯೆ ದಿನದಿನಕ್ಕೂ ದ್ವಿಗುಣಿತವಾಗುತ್ತ ನಡೆಯಿತು.

## ಜ್ಯುಬಿಲಿ ಗ್ರಂಥಾಲಯುಗಳು

೧೮೫೭ ರ ನಂತರ ಭಾರತದ ರಾಜ್ಯ ಕಾರಭಾರ ಕಂಪನಿ ಸರಕಾರದಿಂದ ರಾಣೀ ಸರಕಾರಕ್ಕೆ ಹಸ್ತಾಂತರಗೊಂಡಿತು. ವ್ಹಿಕ್ಟೋರಿಯಾ ಮಹಾರಾಣಿ ರಾಜ್ಯದಾಡಳಿತೆಯನ್ನು ಕೈಕೊಂಡ ಕೆಲವೇ ವರ್ಷಗಳಲ್ಲಿ ದೇಶದಲ್ಲಿ ಕೆಲಕಾಲ ನೆಮ್ಮದಿ ತಲೆದೋರಿತು. ಅಂತೆಯೇ ರಾಣಿಯ ಜ್ಯುಬಿಲಿ ಸಮಾರಂಭ ಸಮೀಪಿಸಿದೊಡನೆ ದೇಶದ ಅನೇಕ ಪಟ್ಟಣಗಳಲ್ಲಿ ಆವಳ ಗೌರವಾರ್ಥವಾಗಿ, ಅವಳಿಗೆ ಕೃತಜ್ಞತೆ ಸೂಚಿಸುವದಕ್ಕಾಗಿ ಅನೇಕ "ಜ್ಯುಬಿಲಿ ಸ್ಮಾರಕ ಗ್ರಂಥಾಲಯಗಳು" ಸ್ಥಾಪಿಸಲ್ಪಟ್ಟವು.

ಉದಾಹರಣೆಗಾಗಿ ಫಲ್ಟನದಲ್ಲಿ ೧೮೭೨ ರಲ್ಲಿ ಸ್ಥಾಪಿಸಲ್ಪಟ್ಟ "ವ್ಹಿಕ್ಟೋರಿಯಾ ಡೈಮಂಡ್ ಜ್ಯುಬಿಲಿ ಲೈಬ್ರರಿ," ೧೮೯೭ ರಲ್ಲಿ ಪತಿಯಾಳಾದಲ್ಲಿ ತೆರೆಯಲ್ಪಟ್ಟ "ರಾಜೇಂದ್ರ ವ್ಹಿಕ್ಟೋರಿಯಾ ಡೈಮೆಂಡ ಜುಬಿಲಿ ಪಬ್ಲಿಕ್ ಲೈಬ್ರರಿ" ಮುಂತಾದವುಗಳು.

## ರಾಜಕೀಯ ಆಂದೋಲನ

ದೇಶದ ದಾಸ್ಯವಿಮೋಚನೆಯನ್ನು ಸಾಧಿಸಿದ ಕಾಂಗ್ರೆಸ್

ಮಹಾಸಂಸ್ಥೆ ೧೮೮೫ ರಲ್ಲಿ ಮೂಡಿ ಬಂದ ಸುಶಿಕ್ಷಿತ ಜನತೆಯಲ್ಲಿನ ದೇಶಪ್ರೇಮಕ್ಕೆ ಕಿಡಿ ಕೊಟ್ಟಿತು. ಪ್ರಾಂತದ, ದೇಶದ ಪುನರುಜ್ಜೀವನಕ್ಕಾಗಿ, ಜನ ಕಂಕಣಬದ್ಧರಾಗ-ತೊಡಗಿದರು. ಈ ಉದ್ದೇಶಗಳನ್ನಿಟ್ಟುಕೊಂಡ ಅನೇಕ ಸಂಘ ಸಂಸ್ಥೆಗಳು ಈ ದಶಕದಲ್ಲಿ ರೂಪುಗೊಂಡವು. ಹಲವಾರು ಗ್ರಂಥಾಲಯಗಳೂ ಸ್ಥಾಪಿತವಾದವು. ಇಂಥವು-ಗಳಲ್ಲಿ ನಾಗಪುರದಲ್ಲಿ ಸ್ಥಾಪಿತವಾದ "ರಾಜಾರಾಮ ಸೀತಾ-ರಾಮ ದೀಕ್ಷಿತ ಗ್ರಂಥಾಲಯ" (೧೮೯೫), ಶ್ರೀನಗರದಲ್ಲಿ ಸ್ಥಾಪಿತವಾದ "ಸಾರ್ವಜನಿಕ ವಾಚನಾಲಯ" (೧೮೯೮), ಮದ್ರಾಸ ನಗರದಲ್ಲಿ ತೆರೆಯಲ್ಪಟ್ಟ "ಕೊನ್ನೆಮಾರಾ ಸಾರ್ವ-ಜನಿಕ ಗ್ರಂಥಾಲಯ" (೧೮೯೬) ಇವೇ ಮೊದಲಾದವು ಗಣನೀಯವಾದವುಗಳು.

ಇಷ್ಟೆಲ್ಲ ದೇಶದಾದ್ಯಂತ ನಡೆದಿರುವಾಗ ಕರ್ನಾಟಕ ಸುಮ್ಮನಿದ್ದೀತೇ ? ಇಂಥ ಚಟುವಟಿಕೆಗಳು ಇಲ್ಲಿಯೂ ಜರುಗ ದಿರಲಿಲ್ಲ. ಕನ್ನಡಿಗರನ್ನು ಒಂದುಗೂಡಿಸುವ, ಅವರ ಗತ ವೈಭವದ ಅರಿವನ್ನು ಅವರಿಗೆ ಮಾಡಿಕೊಡುವ ಕನ್ನಡ ಭಾಷೆ ಯನ್ನು ಪುನರುಜ್ಜೀವನಗೊಳಿಸುವ, ಪ್ರಯತ್ನಗಳು ಉತ್ಸಾಹ ದಿಂದ, ಹುಮ್ಮನಸ್ಸಿನಿಂದ ನಡೆದವು. ಇವೆಲ್ಲವುಗಳ ಫಲವಾಗಿ ಕರ್ನಾಟಕ ವಿದ್ಯಾವರ್ಧಕ ಸಂಘ ೧೮೯೦ ರಲ್ಲಿ ಧಾರವಾಡದಲ್ಲಿ ಜನಿಸಿತು. ಸಂಘದ ಅನೇಕ ಉದ್ದೇಶಗಳಲ್ಲಿ ಗ್ರಂಥಾಲಯ ಚಳವಳಿಗೆ ಉತ್ತೇಜನ ಕೊಡುವದೂ ಒಂದಾಗಿತ್ತು.

ಪ್ರಾಂತದಾದ್ಯಂತ ಗ್ರಂಥಾಲಯಗಳನ್ನೂ, ವಾಚನಾಲಯಗಳನ್ನೂ ತೆರೆಯಬೇಕು, ತಾನು ಪ್ರಸಿದ್ಧಿಸುವ ಗ್ರಂಥಗಳನ್ನು ಇವೆಲ್ಲ ಗ್ರಂಥಾಲಯಗಳಿಗೆ ಕಾಣಿಕೆಯಾಗಿ ಕೊಡಬೇಕು, ಎಂದು ಮುಂತಾಗಿ ಸಂಘ ತನ್ನ ಕಾರ್ಯಕ್ಷೇತ್ರವನ್ನು ವಿಶಾಲವಾಗಿರಿಸಿಕೊಂಡಿತ್ತು. ೧೮೯೭ ರಲ್ಲಿ 'ವಾಗ್ಭೂಷಣ' ವೆಂಬ ನಾಮಧೇಯವುಳ್ಳ ನಿಯತಕಾಲಿಕೆಯನ್ನು ಸಂಘ ಪ್ರಾರಂಭಿಸಿತು. ಈ ನಿಯತಕಾಲಿಕೆಯೊಳಗಿನ ಕೆಲವು ಪುಟಗಳು ಆಗಿನ ಕಾಲದಲ್ಲಿದ್ದ ಗ್ರಂಥಾಲಯಗಳ ವರ್ಣನೆಯ ಬಗ್ಗೆ ವೀಸಲಾಗಿದ್ದವು.

ದೇಶದಾದ್ಯಂತ ಹಬ್ಬಿಕೊಂಡ ರಾಜಕೀಯ ಚಳವಳಿಯ ಅಂಗವಾಗಿ ಗ್ರಂಥಾಲಯ ಚಳವಳಿಯೂ ಬಲಿಯತೊಡಗಿತು. ಗ್ರಂಥಗಳ ಹಾಗೂ ಗ್ರಂಥಾಲಯಗಳ ಮೂಲಕ ಜನರಲ್ಲಿ ಜಾಗೃತಿಯನ್ನುಂಟು ಮಾಡುವದು ಸಾಧ್ಯವೆಂದರಿತುಕೊಂಡ ರಾಜಕೀಯ ಮುಖಂಡರು ಗ್ರಂಥಾಲಯಗಳ ಸ್ಥಾಪನೆಗೆ ಉತ್ತೇಜನವನ್ನೀಯಹತ್ತಿದರು. ಗ್ರಂಥಾಲಯಗಳಲ್ಲಿ ರಾಜಕೀಯ ಸಾಹಿತ್ಯವೂ ಸೇರ್ಪಡೆಯಾಗತೊಡಗಿತು.

ಕರ್ನಾಟಕದಲ್ಲಿ ಕೂಡ ಇಂಥ ಪ್ರಯತ್ನಗಳು ನಡೆದು ಹೋದವು. ಕರ್ನಾಟಕದ ಕುಲಪುರೋಹಿತರೆಂದೆನಿಸಿದ ಶ್ರೀಮಾನ್ ಆಲೂರ ವೆಂಕಟರಾಯರೇ ಮೊದಲಾದವರು ಈ ದಿಶೆಯಲ್ಲಿ ಕಾರ್ಯಪ್ರವೃತ್ತರಾದರು.

ಇಂಥ ಆರಂಭಗಳಿಗೆ ಧನಿಕರ ಬೆಂಬಲವಿದ್ದಿದ್ದರೆ, ಸರಕಾರದ ಆಸರವಿದ್ದಿದ್ದರೆ, ಜನತೆ ಸಹಾನುಭೂತಿ ತೋರಿದ್ದರೆ, ಭಾರತ ಇಂದು ಗ್ರಂಥಾಲಯಗಳ ಬೀಡಾಗದೆ ಇರುತ್ತಿರಲಿಲ್ಲ. ಆದರೇನು? ಆಳರಸರಂತೂ ಇಂಥ ಪ್ರಯತ್ನಗಳನ್ನು ಅನಾಸ್ಥೆಯಿಂದ ಕಾಣುತ್ತಿದ್ದರು. ಭಾರತೀಯರನ್ನೆಲ್ಲ ಸುಶಿಕ್ಷಿತರನ್ನಾಗಿ ಮಾಡಿ, ಭಾರತವನ್ನು ಒಂದು ಸಮೃದ್ಧವಾದ, ಬಲಾಢ್ಯವಾದ ದೇಶವನ್ನಾಗಿ ಮಾಡುವದು ಅವರ ಉದ್ದೇಶವಾಗಿರಲಿಲ್ಲ. ಬ್ರಿಟಿಶ್ ಸಾಮ್ರಾಜ್ಯ ಭಾರತದಲ್ಲಿ ದೀರ್ಘಾಯುವಾಗಿ ಬಹುಕಾಲ ಬಾಳಬೇಕೆಂಬುದೊಂದೇ ಅವರ ಧ್ಯೇಯವಾಗಿತ್ತಾದಕಾರಣ ಅವರು ಇಂಥ ಪ್ರಗತಿಪರ ವಿಚಾರಗಳನ್ನೂ, ಪ್ರಯತ್ನಗಳನ್ನೂ ಅಷ್ಟೊಂದು ಉತ್ಸಾಹದಿಂದ ಕಾಣುತ್ತಿರಲಿಲ್ಲ.

## ಇಪ್ಪತ್ತನೆಯ ಶತಮಾನ

### ಬಡೋದೆ

ಅಂತೆಯೇ ಭಾರತದಲ್ಲಿ ಪ್ರಪ್ರಥಮವಾಗಿ ಸಾರ್ವಜನಿಕ ವಾಚನಾಲಯಗಳ ಸುವ್ಯವಸ್ಥಿತ ಯೋಜನೆಯನ್ನು ರಚಿಸಿ, ಕಾರ್ಯಗತ ಮಾಡಿದ ಶ್ರೇಯಸ್ಸು ಆದಾವ ಬ್ರಿಟಿಶ್ ವ್ಹಾಯಿಸರಾಯನಿಗಾಗಲೀ ಗವ್ಹರ್ನರನಿಗಾಗಲೀ ದೊರೆಯದೆ, ಬಡೋದೆಯ ದೂರದೃಷ್ಟಿಯುಳ್ಳ ಮಹಾರಾಜರಾದ ಸಯಾಜಿರಾವ ಗಾಯಕವಾಡರಿಗೆ ಸಂದಿತು.

೧೯೧೦ ರಲ್ಲಿ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯವಾಗಿ ಮಾಡಿದ ಈ ಮಹನೀಯರು ಶಾಲೆ ಬಿಟ್ಟ ನಂತರ ಸಾಕ್ಷರಿಗಳು ಮತ್ತೆ ನಿರಕ್ಷರಿಗಳಾಗದಂತೆ ನೋಡಿಕೊಳ್ಳುವ, ಸಂಸ್ಥಾನದಲ್ಲಿನ ಸುಶಿಕ್ಷಿತರಿಗೆ ಅವರ ಜ್ಞಾನದಾಹವನ್ನಾರಿಸಿ ಕೊಳ್ಳುವದಕ್ಕೆ ಸಾಧನೆ ಕಲ್ಪಿಸಿಕೊಡುವ, ಉದ್ದೇಶದಿಂದ ಗ್ರಂಥಾಲಯಗಳ ತೋರಣವನ್ನೇ ಸಂಸ್ಥಾನದುದ್ದಕ್ಕೂ ತೂಗಿಬಿಟ್ಟರು. ಈ ಕಾರ್ಯದಲ್ಲಿ ಮಹಾರಾಜರ ಬೆನ್ನೆಲುವಾಗಿ ನಿಂತವರು ಶ್ರೀ ಡಬ್ಲೂ. ಎ. ಬೋರ್ಡನ್ (W. A. Borden) ಎಂಬ ಅಮೇರಿಕೆಯ ಗ್ರಂಥಾಲಯ ತಜ್ಞರು. ಇವರ ಸಲಹೆಯ ಮೇರೆಗೆ ಒಂದು ಯೋಜನೆಯನ್ನು ತಯಾರಿಸಿ ಅದರನ್ವಯ ಬಡೋದೆಯಲ್ಲಿ ಒಂದು ಕೇಂದ್ರ ಗ್ರಂಥಾಲಯವನ್ನೂ, ಅದರ ಅಂಗವಾಗಿ ಜಿಲ್ಹೆ, ತಾಲೂಕು ಹಾಗೂ ಹಳ್ಳಿಗಳಲ್ಲಿ ಸಣ್ಣ ಸಣ್ಣ ಗ್ರಂಥಾಲಯಗಳನ್ನೂ, ಹೆಣ್ಣುಮಕ್ಕಳು ಹಾಗೂ ಚಿಕ್ಕಮಕ್ಕಳು ಇವರಿಗಾಗಿ ಬೇರೆ ಬೇರೆ ಗ್ರಂಥಾಲಯಗಳನ್ನೂ, ಸ್ಥಾಪಿಸಿದ ಮಹಾರಾಜರು ಸ್ವತಃ ತಮ್ಮ ಅರಮನೆಯಲ್ಲಿಯ ೨೦,೦೦೦ ಗ್ರಂಥಗಳನ್ನು ಕೇಂದ್ರ ಗ್ರಂಥಾಲಯಕ್ಕೆ ದಾನ ಮಾಡಿದರು. ಈ ಗ್ರಂಥಾಲಯ ಪ್ರಸಾರದ ಸರ್ವಾಂಗೀಣ ಅಭಿವೃದ್ಧಿಯನ್ನು ಕಾಪಾಡಿಕೊಳ್ಳಲಿಕ್ಕೆ ಒಂದು ಗ್ರಂಥಾಲಯ ಶಾಖೆಯನ್ನೇ ತೆರೆಯಲಾಯಿತು. ಗಾಲಿಯ ಗ್ರಂಥಾಲಯಗಳೂ (Mobile Libraries) ಅಸ್ತಿತ್ವದಲ್ಲಿ ಬಂದವು. ಗ್ರಂಥಾಲಯ ಶಾಸ್ತ್ರದಲ್ಲಿ ಶಿಕ್ಷಣ ಕೊಡುವ ವ್ಯವಸ್ಥೆಯವನ್ನೂ ಮಾಡಲಾಯಿತು. ೧೯೩೬ ರಲ್ಲಿ

‘ಬಡೋದೆಯ ಗ್ರಂಥಾಲಯ ಸಂಘದ ಜನನವಾಯಿತು. ಇದೆಲ್ಲದರ ಪರಿಣಾಮ, ಇಂದು ಬಡೋದೆ ತನ್ನ ೮೫% ರಷ್ಟು ಪ್ರಜೆಗಳಿಗೆ ಗ್ರಂಥಾಲಯ ಸೇವೆ ಸಲ್ಲಿಸುತ್ತಿದೆ.

## ಆಂಧ್ರ

ಆದರೆ ಗ್ರಂಥಾಲಯ ಸಂಘವನ್ನು ಸ್ಥಾಪಿಸುವದರಲ್ಲಿ ಮೊದಲಿಗರೆಂದರೆ ಆಂಧ್ರರೇ ಸರಿ. ೧೯೧೪ ರಲ್ಲಿ ಸ್ಥಾಪಿತ-ವಾದ ‘ಆಂಧ್ರ ಗ್ರಂಥಾಲಯ ಸಂಘ’ ಭಾರತದ ಪ್ರಥಮ ಗ್ರಂಥಾಲಯ ಸಂಘ. ಅದೇ ವರುಷ ವಿಜಯವಾಡಾದಲ್ಲಿ ಮೊದಲ ಬಾರಿ ಆಂಧ್ರ ಗ್ರಂಥಾಲಯ ಪರಿಷತ್ತು ಸೇರಿತು. ಭಾರತದ ಪ್ರಥಮ ಗ್ರಂಥಾಲಯ ನಿಯತಕಾಲಿಕೆಯಾದರೂ ಆಂಧ್ರರಿಂದಲೇ ಪ್ರಾರಂಭಿಸಲ್ಪಟ್ಟಿತು. “ಇಂಡಿಯನ್ ಲೈಬ್ರರಿ ಜರ್ನಲ್” (**Indian Library Journal**), ಎಂಬ ತಲೆಕಟ್ಟಿನ ಈ ನಿಯತಕಾಲಿಕೆ ಬಹಳ ದಿನ ಬಾಳಲಿಲ್ಲ. ೧೯೩೪ ರಿಂದ ಸಂಘದವರು “ಆಂಧ್ರ ಗ್ರಂಥಾಲಯಮು” ಎಂಬ ಇನ್ನೊಂದು ನಿಯತಕಾಲಿಕೆಯನ್ನು ಹೊರಡಿಸುತ್ತಿದ್ದಾರೆ. ಆಂಧ್ರರು ಗ್ರಂಥಾಲಯ ಸೇವೆ ಸಲ್ಲಿಸು-ವಲ್ಲಿ ಇನ್ನೊಂದು ಹೊಸ ಹಾದಿ ತುಳಿದವರಾಗಿದ್ದಾರೆ. ೧೯೩೫ ರಲ್ಲಿ ಪೆದ್ದಂಪಾಲೆಂ ಎಂಬಲ್ಲಿಯ ಕೇಂದ್ರ ಗ್ರಂಥಾ-ಲಯದವರು ‘ತೇಲುವ ಗ್ರಂಥಾಲಯ ಸೇವೆ’ಯನ್ನು ಪ್ರಾರಂಭಿಸಿದರು. ಇದರನ್ವಯ ೩೦ ಹಳ್ಳಿಗಳಿಗೆ ಸಾರಿಗೆ-ಮಾಡುತ್ತಿದ್ದ ನಾವೆಗಳು ತಮ್ಮ ಪ್ರವಾಸಿಕರಿಗೆ ಗ್ರಂಥಗಳ

ನ್ನೊದಗಿಸುತ್ತಿದ್ದವು. ಇದಲ್ಲದೆ ಈ ಸಂಘದವರು ಸೈಕಲ್ಲು-ಗಳ ಮೇಲೂ ಮತ್ತೆ ಕೆಲವು ಸಲ ನಡೆದುಕೊಂಡೂ ಗ್ರಂಥಗಳನ್ನು ಹಳ್ಳಿ ಹಳ್ಳಿಗೆ ಕೊಂಡೊಯ್ದು ದೇಶದಲ್ಲಿಯ ಇನ್ನುಳಿದ ಗ್ರಂಥಾಲಯ ಕಾರ್ಯಕರ್ತರಿಗೆ ಹೊಸ ಹಾದಿ ತೋರಿಸಿದ್ದಾರೆ. ಹಳ್ಳಿಯಲ್ಲಿನ ಗ್ರಂಥಪಾಲರ ತರಬೇತಿಗಾಗಿ ಕೆಲವೊಂದು ವರ್ಗಗಳನ್ನೂ ಇವರು ನಡೆಸಿದ್ದುಂಟು. ಇಲ್ಲಿಯ ವರೆಗೆ ಈ ಸಂಘ ೨೪ ಪುಸ್ತಿಕೆಗಳನ್ನು ಪ್ರಕಟಿಸಿದೆ.

## ಪಂಜಾಬ

ಇದೇ ವೇಳೆಗೆ ಪಂಜಾಬ ವಿಶ್ವವಿದ್ಯಾಲಯದವರು ಇನ್ನೊಬ್ಬ ಅಮೇರಿಕೆಯ ತಜ್ಞರನ್ನು ತಮ್ಮ ಗ್ರಂಥಾಲಯ-ವನ್ನು ಹೊಸ ಮಾದರಿಯ ಮೇಲೆ ಪುನರ್ರಚಿಸಲ ಆಮಂತ್ರಿಸಿದರು. ಆ ಆಮಂತ್ರಣವನ್ನು ಸ್ವೀಕರಿಸಿ ಬಂದ ಅಸಾ ಡಾನ್ ಡಿಕಿನ್ಸನ್‌ರು (Asa Don Dickinson) ೧೯೧೫ರಲ್ಲಿ ಗ್ರಂಥಪಾಲರ ತರಬೇತಿಗಾಗಿ ಒಂದು ವರ್ಗವನ್ನೇ ತೆರೆದರು. ಪಂಜಾಬ ವಿಶ್ವವಿದ್ಯಾಲಯದಲ್ಲಿ ಅವರು ಓದು ಗರಿಗೆ ನೇರವಾಗಿ ಪುಸ್ತಕಗಳನ್ನಿಟ್ಟ ಕಪಾಟುಗಳಿಗೆ ಹೋಗಿ ತಮಗೆ ಬೇಕಾದ ಗ್ರಂಥಗಳನ್ನು ಆಯ್ದುಕೊಳ್ಳುವ ಅವಕಾಶ-ವನ್ನು ಕಲ್ಪಿಸಿಕೊಟ್ಟನು. ತಮ್ಮ ಸಹೋದ್ಯೋಗಿಯೂ ಸಹಾಯಕರೂ ಆದ ಶ್ರೀ ಮುಕುಂದಲಾಲ ಭಾಟಿಯಾ ಇವರ, ಸಹಾಯದಿಂದ 'ಪಂಜಾಬ ಲೈಬ್ರರಿ ಪ್ರೈಮರ' (Punjab

Library Primer ) ಎಂಬ ಗ್ರಂಥವನ್ನು ೧೯೧೬ ರಲ್ಲಿ ಬರೆದು ಪ್ರಸಿದ್ಧಿಸಿದರು. ಭಾರತದಲ್ಲಿ ಪ್ರಥಮವಾಗಿ ಪ್ರಸಿದ್ಧವಾದ ಗ್ರಂಥಾಲಯ ಶಾಸ್ತ್ರಕ್ಕೆ ಸಂಬಂಧಪಟ್ಟ ಪುಸ್ತಕವೆಂದರೆ ಇದೇ. ಡಿಕಿನ್‌ಸನ್ ಇಷ್ಟಕ್ಕೇ ಸಮಾಧಾನಪಟ್ಟುಕೊಳ್ಳಲಿಲ್ಲ. ಗ್ರಂಥಾಲಯ ಚಳವಳಿ ಸದಾ ಜಾಗೃತವಾಗಿರಬೇಕಾದರೆ ಗ್ರಂಥಾಲಯ ಸಂಘವೊಂದರಿಂದಲೇ ಸಾಧ್ಯವೆಂದರಿತ ಅವರು 'ಪಂಜಾಬ ಗ್ರಂಥಾಲಯ ಸಂಘ'ವನ್ನು ಸ್ಥಾಪಿಸಿದರು. ೧೯೩೦ ರ ನವ್ಹೆಂಬರದಲ್ಲಿ ಈ ಸಂಘವು ಮಾಡರ್ನ್ ಲೈಬ್ರೇರಿಯನ್' ( Modern Librarian ) ಎಂಬ ಗ್ರಂಥಾಲಯ ಶಾಸ್ತ್ರಕ್ಕೆ ಸಂಬಂಧಪಟ್ಟ ನಿಯತಕಾಲಿಕೆಯನ್ನು ಹೊರಡಿಸತೊಡಗಿತು. ಈ ಎಲ್ಲ ಚಟುವಟಿಕೆಗಳ ಪರಿಣಾಮವಾಗಿ ಪಂಜಾಬ ಸರಕಾರದವರು ಮುನಸಿಪಾಲಿಟಿಗಳಿಗೆ ಮತ್ತು ಇತರ ಸ್ಥಾನಿಕ ಸಂಸ್ಥೆಗಳಿಗೆ ಅಲ್ಲಲ್ಲಿ ಗ್ರಂಥಾಲಯಗಳನ್ನು ಸ್ಥಾಪಿಸಲು ಪ್ರೋತ್ಸಾಹ ನೀಡಿದರು.

## ಮದ್ರಾಸ

ಇತ್ತ ಮದ್ರಾಸ ನಗರದಲ್ಲಿ ೧೯೨೮ ರ ಜನವರಿ ೩ ರಂದು ನಗರದ ಪ್ರಮುಖರ ಸಭೆಯೊಂದು ಸೇರಿತ್ತು. ಈ ಸಭೆಯಲ್ಲಿ ಜರುಗಿದ ಮಾತು ಕತೆಗಳ ಪರಿಣಾಮವಾಗಿ ಅದೇ ವರುಷ 'ಮದ್ರಾಸ ಗ್ರಂಥಾಲಯ ಸಂಘ'ವು ಹುಟ್ಟಿಬಂತು. ಇತ್ತೀಚೆಗೆ ಗ್ರಂಥಾಲಯ ಸೇವೆಗಾಗಿ ಭಾರತ

ಸರಕಾರದಿಂದ "ಪದ್ಮಶ್ರೀ" ಪದವಿ ಪಡೆದ ಡಾ. ಎಸ್. ಆರ್. ರಂಗನಾಥನ್ನರೇ ಈ ಸಂಘದ ಪ್ರಥಮ ಕಾರ್ಯದರ್ಶಿಗಳಾಗಿದ್ದರು (ಗ್ರಂಥಾಲಯ ಕ್ಷೇತ್ರದಲ್ಲಿ ದೇಶಕ್ಕೂ, ವಿಶ್ವಕ್ಕೂ ಅಪಾರ ಸೇವೆ ಸಲ್ಲಿಸಿದ ಈ ಮಹನೀಯರು, ಜೀವನದುದ್ದಕ್ಕೂ ತಮ್ಮ ಅಲ್ಪ ವೇತನದಲ್ಲಿಯೇ ಮಿತವ್ಯಯದಿಂದಿದ್ದುಕೊಂಡು ಉಳಿಸಿದ ಒಂದು ಲಕ್ಷ ರೂಪಾಯಿಗಳನ್ನು, ಮದ್ರಾಸ ವಿಶ್ವವಿದ್ಯಾಲಯದವರಿಗೆ ಗ್ರಂಥಾಲಯ ಶಾಸ್ತ್ರದಲ್ಲಿ ಒಬ್ಬ ಪ್ರಾಧ್ಯಾಪಕನನ್ನು ನೇಮಿಸಿಕೊಳ್ಳಲು ದಾನವಾಗಿ ಕೊಟ್ಟಿದ್ದಾರೆ. ಇತ್ತೀಚೆ ಭಾರತ ಸರಕಾರ ಇವರನ್ನು ಗ್ರಂಥಾಲಯ ಶಾಸ್ತ್ರದ ರಾಷ್ಟ್ರೀಯ ಪ್ರಾಧ್ಯಾಪಕರೆಂದು ಹೆಸರಿಸಿ ಗೌರವಿಸಿದೆ) ೧೯೨೯ ರಲ್ಲಿ ಸಂಘವು ೩ ತಿಂಗಳ ಗ್ರಂಥಾಲಯ ತರಬೇತಿ ವರ್ಗವೊಂದನ್ನು ಪ್ರಾರಂಭಿಸಿತು. ಈ ಸಂಘದ ಪ್ರಚಾರ ಕಾರ್ಯದ ಫಲವಾಗಿ ಕೊನ್ನೆಮಾರಾ ಸಾರ್ವಜನಿಕ ವಾಚನಾಲಯದವರು ಸಾರ್ವಜನಿಕರಿಗೆ ಗ್ರಂಥಗಳನ್ನು ಮನೆಗೆ ಓದಲು ಕೊಡುವ ಪದ್ಧತಿಯನ್ನು ಪ್ರಾರಂಭಿಸಿದರು. ೧೯೩೧ ರಲ್ಲಿ ಮನ್ನಾರಗುಡಿಯ ಸಿರಿವಂತರೊಬ್ಬರು ಮನ್ನಾರ ಗುಡಿ ಮತ್ತು ಅದರ ಸಮೀಪದ ಹಳ್ಳಿಗಳಿಗೆ ಗ್ರಂಥಗಳನ್ನೊದಗಿಸುವದರ ಸಲುವಾಗಿ ಗಾಲಿಯ ಗ್ರಂಥಾಲಯ ವೊಂದನ್ನು ಸಂಘಕ್ಕೆ ಕಾಣಿಕೆಯಾಗಿ ಕೊಟ್ಟರು.

ಸಂಘ ಇಲ್ಲಿಯ ವರೆಗೆ ಗ್ರಂಥಾಲಯ ಶಾಸ್ತ್ರಕ್ಕೆ ಸಂಬಂಧ ಪಟ್ಟ ೨೪ಕ್ಕೂ ಮಿಕ್ಕಿ ಗ್ರಂಥಗಳನ್ನು ಪ್ರಸಿದ್ಧಿಸಿದೆ. ಗ್ರಂಥಾಲಯ ಚಳವಳಿಗೆ ಅಪಾರವಾದ ಸೇವೆ ಸಲ್ಲಿಸಿದೆ. ಇಷ್ಟೆಲ್ಲ

ಸಾಹಸ, ಪರಿಶ್ರಮ ವ್ಯರ್ಥವಾಗಿ ಹೋಗಿಲ್ಲ. ಇಂದು ಸಮಸ್ತ ಭಾರತದಲ್ಲಿ ಕಾಯಿದೆಯ ಮೂಲಕ ಸರ್ವರಿಗೂ ಗ್ರಂಥಾಲಯ ಸೇವೆ ಸಲ್ಲುವಂತೆ ಮಾಡಿದ ಪ್ರಪ್ರಥಮ ರಾಜ್ಯ, ಮದ್ರಾಸು ರಾಜ್ಯವಾಗಿದೆ.

**ಕೇರಳ**

ಸಾಕ್ಷರತೆಯಲ್ಲಿ ಎಲ್ಲ ರಾಜ್ಯಗಳನ್ನು ಹಿಂದೆ ಹಾಕಿದ ಕೇರಳ ರಾಜ್ಯ, ಗ್ರಂಥಾಲಯ ಚಳವಳಿಯಲ್ಲಿ ಹಿಂದುಳಿದಿಲ್ಲ. ೧೯೨೭ ರಲ್ಲಿ ಕೇರಳದ ಕೆಲವು ಹಿರಿಯ ಗ್ರಂಥಾಲಯ ಕಾರ್ಯಕರ್ತರು ಮದ್ರಾಸದಲ್ಲಿ ಜರುಗಿದ ನಾಲ್ಕನೆಯ ಅಖಿಲ ಭಾರತ ಗ್ರಂಥಾಲಯ ಪರಿಷತ್ತಿನಿಂದ ಸ್ಫೂರ್ತಿ ಪಡೆದವರಾಗಿ ಕೇರಳಕ್ಕೆ ಮರಳಿ ಹೋದೊಡನೆಯೇ ೧೯೩೦ ರಲ್ಲಿ ಕೇಂದ್ರ ಗ್ರಂಥಾಲಯವನ್ನು ಸ್ಥಾಪಿಸಿದರು. ಈ ಗ್ರಂಥಾಲಯದಿಂದ ಗ್ರಂಥಗಳನ್ನು ಎಲ್ಲ ಕಡೆಗೂ ಕಳುಹಲಾಗುತ್ತಿತ್ತು. ಅದೇ ಸಮಯದಲ್ಲಿ ಶ್ರೀ ಕುನ್ಹಿರಾಮ ಮೆನನ್ ಇವರ ಪರಿಶ್ರಮದ ಫಲವಾಗಿ 'ಅಖಿಲ ಕೇರಳ ಗ್ರಂಥಾಲಯ ಸಂಘ' ವೂ ಸ್ಥಾಪಿಸಲ್ಪಟ್ಟಿತು. ೧೯೩೧ ರಲ್ಲಿ "ಗ್ರಂಥ ವಿಹಾರಂ" ಎಂಬ ನಿಯತಕಾಲಿಕೆಯ ಮೊದಲನೇ ಸಂಚಿಕೆ ಬೆಳಕು ಕಂಡಿತು. ೧೯೩೮ ರಲ್ಲಿ ಹೊಸದೊಂದು 'ಮಲಬಾರ ಗ್ರಂಥಾಲಯ ಸಂಘ' ಸ್ಥಾಪಿತವಾಯಿತು. ೧೯೪೩ ರಲ್ಲಿ ಈ ಸಂಘವು 'ಕೇರಳ ಗ್ರಂಥಾಲಯ ಸಂಘ' ವೆಂಬ ಹೆಸರಿನಲ್ಲಿ ನೋಂದಾಯಿಸಲ್ಪಟ್ಟಿತು. ೧೯೪೫ ರಿಂದ 'ಕೇರಳ ಗ್ರಂಥಶಾಲಾ

ಸಂಘಮ್' ಎಂಬ ಹೆಸರಿನಿಂದ ಈ ಸಂಘವು ಒಳ್ಳೇ ಚಟುವಟಿಕೆಯಿಂದ ಕಾರ್ಯ ಮಾಡುತ್ತಿದೆ. ಸದ್ಯ 'ಗ್ರಂಥಾಲೋಕಮ್' ಎಂಬ ಮಾಸಿಕ ಹೊರಡಿಸುತ್ತಿದೆ. (೧೯೬೫ ರಲ್ಲಿ ಕೇರಳದಲ್ಲಿ ಒಟ್ಟು ೨೬೦೦ ಕ್ಕಿಂತ ಹೆಚ್ಚು ಗ್ರಂಥಾಲಯಗಳಿವೆಯೆಂದು ಹೇಳಲಾಗುತ್ತಿತ್ತು.) ೧೯೬೫ ರ ಡಿಸೆಂಬರದಲ್ಲಿ ಕೇರಳ ಗ್ರಂಥಪಾಲಕರ ಸಂಘವೊಂದು ತಿರುವನಂತಪುರದಲ್ಲಿ ಜನಿಸಿತು.

## ಬಂಗಾಲ

ಇತ್ತ ಬಂಗಾಲದಲ್ಲಿ ೧೯೨೫ ರಲ್ಲಿ ಪ್ರಥಮ ಬಾರಿ ಗ್ರಂಥಾಲಯ ಕಾರ್ಯಕರ್ತರ ಪರಿಷತ್ತೊಂದು ಸೇರಿ, 'ಅಖಿಲ ಬಂಗಾಲ ಗ್ರಂಥಾಲಯ ಸಂಘ' ವೊಂದನ್ನು ಸ್ಥಾಪಿಸಬೇಕೆಂಬ ಗೊತ್ತುವಳಿಯನ್ನು ಅಂಗೀಕರಿಸಿ, ಇದಕ್ಕೋಸ್ಕರ ರವೀಂದ್ರ-ನಾಥ ಠಾಕೂರರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿತು.

೧೯೨೮ ರಲ್ಲಿ ಕೂಡಿದ ಈ ಸಂಘದ ಎರಡನೆಯ ಸಭೆ-ಯಲ್ಲಿ ಸಂಘದ ಹೆಸರನ್ನು 'ಬಂಗೀಯ ಗ್ರಂಥಾಲಯ ಪರಿಷದ್'ಎಂದು ಬದಲಿಸಲಾಯಿತು. ಪರಿಷತ್ತಿನ ಮೂರನೆಯ ಸಮ್ಮೇಲನ ೧೯೩೧ ರಲ್ಲಿ ಕಲಕತ್ತೆಯಲ್ಲಿ ಸೇರಿತು. ಮುಂದೆ ಎರಡು ವರ್ಷಗಳ ವರೆಗೆ ಪರಿಷತ್ತು ನಿದ್ದೆ ಹೋಯಿತು. ೧೯೩೩ ರಲ್ಲಿ ಕಲಕತ್ತೆಯಲ್ಲಿ ಸೇರಿದ ಅಖಿಲ ಭಾರತ ಗ್ರಂಥಾಲಯ ಪರಿಷತ್ತಿನ ಸಮಯದಲ್ಲಿ ಬಂಗಾಲದಲ್ಲಿನ

ಗ್ರಂಥಾಲಯ ಪ್ರೇಮಿಗಳು ಮತ್ತೆ ಪರಿಷತ್ತು ಚೇತರಿಸಿಕೊಳ್ಳು ವಂತೆ ಪ್ರಯತ್ನ ಮಾಡಿದರು. 'ಬಂಗಾಲ ಗ್ರಂಥಾಲಯ ಸಂಘ' ಎಂದು ಹೊಸದಾಗಿ ಆದರ ನಾಮಕರಣ ಮಾಡಿ ಆದಕ್ಕೊಂದು ಹೊಸ ಸಂವಿಧಾನವನ್ನು ರೂಪಿಸಿದರು. ಈ ಹೊಸ ಸಂಘದ ಪ್ರಥಮ ಪರಿಷತ್ತು ೧೯೪೬ ರಲ್ಲಿ ಸೇರಿತು. ಅಂದಿನಿಂದ ಈ ಸಂಘ ಅವಿರತವಾಗಿ ಗ್ರಂಥಾಲಯ ಸೇವೆಗಾಗಿ ಪರಿಶ್ರಮಿಸುತ್ತಿದೆ. ಇದರ ಹನ್ನೆರಡನೆಯ ಪರಿಷತ್ತು ೧೯೫೮ ರ ಎಪ್ರಿಲ ತಿಂಗಳಲ್ಲಿ ಪದ್ಮಶ್ರೀ ರಂಗ-ನಾಥನ್ ಅವರ ಅಧ್ಯಕ್ಷತೆಯಲ್ಲಿ ಸೇರಿ ಪಶ್ಚಿಮ ಬಂಗಾಲ ರಾಜ್ಯದ ಸಲುವಾಗಿ ಗ್ರಂಥಾಲಯ ಕಾನೂನಿನ ಕರಡೊಂದನ್ನು ಚರ್ಚಿಸಿ ಅಂಗೀಕರಿಸಿತು. ಸಂಘವು "ಗ್ರಂಥಾಗಾರ" ಎಂಬ ತ್ರೈಮಾಸಿಕವನ್ನು ಹೊರಡಿಸುತ್ತಿದೆ.

ಸಂಘದ ಈ ಎಲ್ಲ ಚಟುವಟಿಕೆಗಳ ಪರಿಣಾಮವಾಗಿ ಬಂಗಾಲ ಸರಕಾರ ಗ್ರಂಥಾಲಯ ಚಳವಳಿಯಲ್ಲಿ ವಿಶೇಷ ಆಸ್ಥೆ ವಹಿಸುವಂತಾಗಿದೆ. ರಾಜ್ಯದಲ್ಲಿರುವ ಸಾರ್ವಜನಿಕ ವಾಚನಾಲಯಗಳಲ್ಲಿಯ ಅನೇಕ ವಾಚನಾಲಯಗಳಿಗೆ ಸರಕಾರ ಧನಸಹಾಯ ನೀಡುತ್ತಿದೆ. ಬಂಣೀಪೂರ, ಕಲಿಂಗಪಾಂಗ ಮುಂತಾದ ಕೆಲವು ಕೇಂದ್ರಗಳಲ್ಲಿ ಪ್ರಾದೇಶಿಕ ವಾಚನಾಲಯ ಗಳನ್ನು ಸರಕಾರದ ಸಹಾಯದಿಂದ ತೆರೆಯಲಾಗಿದೆ. ಇದಲ್ಲದೆ ರಾಜ್ಯ ಸರಕಾರವು ಪ್ರತಿಯೊಂದು ಜಿಲ್ಲೆಗೂ ಒಂದೊಂದು ಗ್ರಂಥಾಲಯ ಸಂಘವನ್ನು ಕಟ್ಟಿಕೊಳ್ಳಲು

ಸಹಾಯ ನೀಡುತ್ತಿದೆ.

## ಬಿಹಾರ

ಬಿಹಾರದಲ್ಲಿ ೧೯೩೬ ರಲ್ಲಿ 'ಬಿಹಾರ ರಾಜ್ಯ ಪುಸ್ತಕಾಲಯ ಸಂಘ' ಸ್ಥಾಪಿತವಾಯಿತು. ಇಂದಿಗೆ ಸುಮಾರು ೪೦೦ ಗ್ರಂಥಾಲಯಗಳು ಈ ಸಂಘದ ಸದಸ್ಯರುಗಳಾಗಿವೆ. ಪಾಟ್ನಾದಿಂದ ಈ ಸಂಘವು "ಪುಸ್ತಕಾಲಯ" ವೆಂಬ ತ್ರೈಮಾಸಿಕವೊಂದನ್ನು ಪ್ರಕಟಿಸುತ್ತಿದೆ. ಈ ಸಂಘದ ಸಲಹೆಯ ಮೇರೆಗೆ ರಾಜ್ಯದಲ್ಲಿಯ ಗ್ರಂಥಾಲಯಗಳಿಗೆ ೧ ಲಕ್ಷ ರೂಪಾಯಿ ಧನಸಹಾಯವನ್ನು ರಾಜ್ಯ ಸರಕಾರ ನೀಡುತ್ತಿದೆ.

ಇದರಂತೆಯೇ ದೇಶದ ಇನ್ನುಳಿದ ಪ್ರಾಂತ, ಪ್ರದೇಶಗಳಲ್ಲಿಯ ಜನ, ಗ್ರಂಥ ಹಾಗೂ ಗ್ರಂಥಾಲಯ ಜಾಗೃತರಾಗಿ ಗ್ರಂಥಾಲಯ ಚಳವಳಿಯನ್ನು ಭರದಿಂದ ಸಾಗಿಸುವದಕ್ಕೋಸ್ಕರ ಗ್ರಂಥಾಲಯ ಸಂಘಗಳನ್ನು ಕಟ್ಟಿಕೊಂಡರು. ಅಂತೆಯೇ 'ಮಹಾರಾಷ್ಟ್ರ ಗ್ರಂಥಾಲಯ ಸಂಘ' (೧೯೪೨), 'ಉತ್ಕಲ ಗ್ರಂಥಾಲಯ ಸಂಘ' (೧೯೪೪), 'ಉತ್ತರ ಪ್ರದೇಶ ಗ್ರಂಥಾಲಯ ಸಂಘ' (೧೯೫೬), 'ಮುಂಬೈ ಗ್ರಂಥಾಲಯ ಸಂಘ' (೧೯೪೪), 'ದಿಲ್ಲಿ ಗ್ರಂಥಾಲಯ ಸಂಘ' (೧೯೫೩) 'ಮಧ್ಯಪ್ರದೇಶ ಗ್ರಂಥಾಲಯ ಸಂಘ' (೧೯೫೭), 'ಗುಜರಾತ

ಗ್ರಂಥಾಲಯ ಸಂಘ' ಇವೆಲ್ಲ ಮೂಡಿ ಬಂದಿವೆ.

'ಉತ್ತರ ಪ್ರದೇಶ ಗ್ರಂಥಾಲಯ ಸಂಘ' "ಲೈಬ್ರರಿ ಕ್ರಾನಿಕಲ್" (Library Chronicle) ಎಂಬ ಮಾಸ-ಪತ್ರಿಕೆಯನ್ನು ಹೊರಡಿಸುತ್ತಿತ್ತು.

ದಿಲ್ಲಿ ಗ್ರಂಥಾಲಯ ಸಂಘ ಒಳ್ಳೆ ಚುರುಕಾಗಿ ಕೆಲಸ ಮಾಡುತ್ತಿದೆ. ೧೯೫೪ ರಲ್ಲಿ ಸಂಘವು ರಾಜ್ಯ ಸರಕಾರಕ್ಕೆ ಗ್ರಂಥಾಲಯ ಕಾಯದೆಯ ಕರಡೊಂದನ್ನು ಸಾದರ ಪಡಿಸಿತು. ಸಂಘದ ಮೊದಲನೆಯ ಪರಿಷತ್ತು ೧೯೫೭ ರಲ್ಲಿ ಸೇರಿತ್ತು. ಸಂಘ "ಲೈಬ್ರರಿ ಹೆರಾಲ್ಡ್" (Library Herald) ಎಂಬ ತ್ರೈಮಾಸಿಕವನ್ನು ೧೯೫೮ ರಿಂದ ಹೊರಡಿಸುತ್ತಿದೆ. ಗ್ರಂಥಾಲಯ ತರಬೇತಿ ವರ್ಗಗಳನ್ನೂ ತೆರೆದಿದೆ.

ಈ ಸಂಘವನ್ನುಳಿದು, ದಿಲ್ಲಿಯಲ್ಲಿ, ಭಾರತ ಸರಕಾರದ ವಿವಿಧ ಶಾಖೆಗಳ ಗ್ರಂಥಾಲಯ ಸಂಘವೂ ಒಂದಿದೆ. ೧೯೩೮ ರಲ್ಲಿ ಸ್ಥಾಪಿತವಾದ ಈ ಸಂಘವು ಗ್ರಂಥಾಲಯ ತರ-ಬೇತಿ ವರ್ಗಗಳನ್ನು ನಡೆಸುತ್ತಿದೆ.

## ಕರ್ನಾಟಕ (ಮೈಸೂರು)

ಇದೆಲ್ಲ ಹೊರಗಿನ ಮಾತಾಯಿತು. ಈ ಎಲ್ಲ ಅವಧಿ-ಯಲ್ಲಿ ಕರ್ನಾಟಕದಲ್ಲಿ ನಡೆದುದೇನು? ಟಿಳಕರ

‘ಹೋಂ ರೂಲು’ ಆಂದೋಲನದಲ್ಲಿ ಶ್ರೀ ಆಲೂರ ವೆಂಕಟರಾಯರ ಅಧ್ಯಕ್ಷತೆಯಲ್ಲಿ ಮೊನೆ ಕಂಡ ಗ್ರಂಥಾಲಯ ಚಳವಳಿ, ಅನಂತರದ ಕಾಂಗ್ರೆಸ್ಸಿನ ಅಸಹಕಾರ ಚಳವಳಿಯಲ್ಲಿ ಸ್ವಲ್ಪ ಇಳಿಮುಖವಾಯಿತು. ೧೯೨೪ ರ ಬೆಳಗಾವಿ ಕಾಂಗ್ರೆಸ್ಸಿನ ಅಂಗವಾಗಿ ದೇಶಬಂಧು ಚಿತ್ತರಂಜನ ದಾಸ ಅವರ ಅಧ್ಯಕ್ಷತೆಯಲ್ಲಿ ನಡೆದ ಅಖಿಲ ಭಾರತೀಯ ವಾಚನಾಲಯ ಪರಿಷತ್ತಿನಿಂದ ಇಲ್ಲಿಯ ಚಳವಳಿ ಮತ್ತೆ ಸ್ಫೂರ್ತಿಯನ್ನು ಪಡೆಯಿತು, ನವಚೈತನ್ಯವನ್ನು ಹೊಂದಿತು. ಆದರೆ ಗ್ರಂಥಾಲಯ ಸಂಘ ಸ್ಥಾಪನೆಯಾಗಲಿಕ್ಕೆ ಇನ್ನೂ ಹಲವಾರು ವರುಷಗಳು ಉರುಳಿ ಹೋಗಬೇಕಾಗಿತ್ತು. ೧೯೨೯ ರಲ್ಲಿ ಮೊದಲ ಬಾರಿ ಅಖಿಲ ಕರ್ನಾಟಕ ಗ್ರಂಥಾಲಯ ಪರಿಷತ್ತು ಧಾರವಾಡದಲ್ಲಿ ಸೇರಿತು. ಈ ಪರಿಷತ್ತಿನ ಫಲವಾಗಿ ‘ಅಖಿಲ ಕರ್ನಾಟಕ ಗ್ರಂಥಾಲಯ ಸಂಘ’ ಜನಿಸಿತು.

ಸಂಘ ಕಾರ್ಯಪ್ರವೃತ್ತವಾಗಬೇಕೆನ್ನುವಷ್ಟರಲ್ಲಿ ಸಮಸ್ತ ಭಾರತ ಅಸಹಕಾರದ ಆಂದೋಲನದಲ್ಲಿ ಮುಳುಗಿತು. ೧೯೩೩ ರಲ್ಲಿ ಎರಡನೆಯ ಪರಿಷತ್ತೊಂದನ್ನು ಕರೆಯುವ ಪ್ರಯತ್ನ ನಡೆಯಿತು. ಆದರೆ ಅದು ಸಫಲವಾಗಲಿಲ್ಲ. ೧೯೪೪ ರಲ್ಲಿ ಧಾರವಾಡದಲ್ಲಿ ಜರುಗಿದ ಏಕೀಕರಣ ಸಮ್ಮೇಲನದ ಅಂಗವಾಗಿ ಸಣ್ಣ ಪ್ರಮಾಣದಲ್ಲಿ ಗ್ರಂಥಾಲಯ ಕಾರ್ಯಕರ್ತರ ಪರಿಷತ್ತೊಂದು ಸೇರಿತು.

ಇದಕ್ಕೂ ಮೊದಲು ಎಂದರೆ ೧೯೩೭ರಲ್ಲಿ ಅಧಿಕಾರದಲ್ಲಿದ್ದ ಮುಂಬೈ ಕಾಂಗ್ರೆಸ್ ಮಂತ್ರಿಮಂಡಲ. ಪ್ರಾಂತದಾದ್ಯಂತ

ಗ್ರಂಥಾಲಯಗಳ ತೋರಣವನ್ನು ತೂಗಿಬಿಡಬೇಕೆಂಬ ಉದ್ದೇಶದಿಂದ ಶ್ರೀ ಎ. ಎ. ಎ. ಫೈಜಿಯವರ ಅಧ್ಯಕ್ಷತೆಯಲ್ಲಿ ಗ್ರಂಥಾಲಯ ಸಲಹಾ ಸಮಿತಿಯೊಂದನ್ನು ನೇಮಿಸಿತು. ಸಮಿತಿ ಪ್ರಾಂತವನ್ನೆಲ್ಲಾ ಸುತ್ತಾಡಿ ೧೯೪೦ ರಲ್ಲಿ ಸರಕಾರಕ್ಕೆ ತನ್ನ ವರದಿಯನ್ನು ಒಪ್ಪಿಸಿತು.

ಫೈಜಿ ಸಮಿತಿ ತಾನು ಮಾಡಿದ ಶಿಫಾರಸುಗಳನ್ನು ಸರಕಾರ ಆರುಹಂತಗಳಲ್ಲಿ ಕಾರ್ಯಗತ ಮಾಡಬೇಕೆಂದು ಸೂಚಿಸಿತ್ತು. ಈ ಆರು ಹಂತಗಳು ಹೀಗಿದ್ದವು.

ಮೊದಲನೆಯ ಹಂತ : ಕೇಂದ್ರ ಹಾಗೂ ಪ್ರಾದೇಶಿಕ ಗ್ರಂಥಾಲಯಗಳನ್ನು ಬಲಪಡಿಸಿಕೊಳ್ಳುವದು.

ಎರಡನೆಯ ಹಂತ : ಜಿಲ್ಹೆಯ ಕೇಂದ್ರಗಳಲ್ಲಿ ಜಿಲ್ಹಾ ಗ್ರಂಥಾಲಯಗಳನ್ನು ಸ್ಥಾಪಿಸುವದು.

ಮೂರನೆಯ ಹಂತ : ತಾಲೂಕು ಹಾಗೂ ಪೇಠಾ ಗ್ರಂಥಾಲಯಗಳ ಸ್ಥಾಪನೆ.

ನಾಲ್ಕನೆಯ ಹಂತ : ಎರಡು ಸಾವಿರದಿಂದ ಐದು ಸಾವಿರ ಜನಸಂಖ್ಯೆಯುಳ್ಳ ಹಳ್ಳಿಗಳಲ್ಲಿ ಗ್ರಂಥಾಲಯಗಳನ್ನು ಪ್ರಾರಂಭಿಸುವದು.

ಐದನೆಯ ಹಂತ : ಒಂದು ಸಾವಿರದಿಂದ ಎರಡು ಸಾವಿರ ಜನವಸತಿಯುಳ್ಳ ಹಳ್ಳಿಗಳಿಗೆ ಗ್ರಂಥಾಲಯ-ಗಳನ್ನೊದಗಿಸುವದು.

ಆರನೆಯ ಹಂತ : ಇನ್ನುಳಿದ ಹಳ್ಳಿಗಳಿಗೆ ಗ್ರಂಥಾಲಯ ಸೇವೆಯ ಏರ್ಪಾಡು ಮಾಡುವದು.

ಸರಕಾರ ವರದಿಯನ್ನು ವಿಚಾರಿಸಬೇಕೆನ್ನುವಷ್ಟರಲ್ಲಿ ರಾಜೀ-ನಾಮೆ ಕೊಡುವ ಪ್ರಸಂಗ ಬಂದಿತು. ತದನಂತರ ೧೯೪೨ ರ ಸ್ವಾತಂತ್ರ್ಯ ಸಮರದ ಗಾಳಿ ಸಮಸ್ತ ಭಾರತವನ್ನಾವರಿಸಿ ಬಿಟ್ಟಿತು.

ಸ್ವಾತಂತ್ರ್ಯದ ಸುಪ್ರಭಾತದಲ್ಲಿ ಮುಂಬೈಯಲ್ಲಿಯ ಕಾಂಗ್ರೆಸ್ ಮಂತ್ರಿಮಂಡಳ ಫೈಜಿ ವರದಿಯಲ್ಲಿಯ ಸೂಚನೆ ಗಳನ್ನು ಕಾರ್ಯಗತ ಮಾಡಲು ನಿರ್ಧರಿಸಿತು. ಅಂತೆಯೇ ೧೯೪೭ ರಲ್ಲಿ ಮುಂಬೈಯಲ್ಲಿ ರಾಜ್ಯ ಕೇಂದ್ರ ಗ್ರಂಥಾಲಯ, ಪುಣೆ, ಅಹಮ್ಮದಾಬಾದ ಹಾಗೂ ಧಾರವಾಡಗಳಲ್ಲಿ ಪ್ರಾದೇ-ಶಿಕ ಕೇಂದ್ರ ಗ್ರಂಥಾಲಯಗಳು ಸ್ಥಾಪಿತವಾದುವು. ಅದ-ರಂತೆಯೇ ಅನೇಕ ಜಿಲ್ಹಾ ಕೇಂದ್ರ ಗ್ರಂಥಾಲಯಗಳು, ತಾಲೂಕಾ ಗ್ರಂಥಾಲಯಗಳು ಮನ್ನಣೆ ಪಡೆದವು.

ಧಾರವಾಡದ ಪ್ರಾದೇಶಿಕ ಕೇಂದ್ರ ಗ್ರಂಥಾಲಯದಿಂದ 'ಕರ್ನಾಟಕ ಗ್ರಂಥಾಲಯ ಸಂಘ' ಮತ್ತೆ ಹೊಸ ಹುರುಪನ್ನು ತಳೆದು ಕಾರ್ಯ ಪ್ರವೃತ್ತವಾಯಿತು. ಒಂದೆರಡು ವರುಷ ಮುಂಬೈ ಸರಕಾರದ ಪ್ರೇರಣೆಯಿಂದಲೇ ಗ್ರಂಥಾಲಯ ತರಬೇತಿ ಸರ್ಟಿಫಿಕೇಟ ವರ್ಗಗಳನ್ನು ನಡೆಸಿಕೊಂಡು ಬಂದಿತು. ಕನ್ನಡದಲ್ಲಿ ಗ್ರಂಥಾಲಯ ಶಾಸ್ತ್ರಕ್ಕೆ ಸಂಬಂಧಿಸಿದ "ಗ್ರಂಥಾಲಯ" ಎಂಬ ಒಂದು ಪಠ್ಯ ಪುಸ್ತಕವನ್ನೂ ಸಂಘ ಪ್ರಸಿದ್ಧಿಸಿತು.

ಆದರೆ ಸಂಘಕ್ಕೆ ಸರಕಾರದಿಂದ ಮನ್ನಣೆ ದೊರೆತುದು ೧೯೫೦ ರಲ್ಲಿ ಮಾತ್ರ. ಇಲ್ಲಿಯವರೆಗೆ ಸಂಘದ ಆಶ್ರಯದಲ್ಲಿ ನಾಲ್ಕು ಪರಿಷತ್ತುಗಳು ಸೇರಿವೆ. ನಾಲ್ಕನೆಯ ಪರಿಷತ್ತು ಪದ್ಮಶ್ರೀ ಬಿ. ಎಸ್. ಕೇಶವನ್ ಇವರ ಅಧ್ಯಕ್ಷತೆಯಲ್ಲಿ ೧೯೫೮ ರ ಫೆಬ್ರುವರಿ ತಿಂಗಳಲ್ಲಿ ಧಾರವಾಡದಲ್ಲಿ ಜರುಗಿತು. ಕರ್ನಾಟಕ ರಾಜ್ಯ ನಿರ್ಮಾಣಗೊಂಡ ನಂತರ ಜರುಗಿದ ಗ್ರಂಥಾಲಯ ಸಮ್ಮೇಲನವೆಂದರೆ ಇದೇ ಮೊದಲನೆಯದು. ಸಮ್ಮೇಲನದಲ್ಲಿ ಸರ್ವಾನುಮತದಿಂದ ಪಾಸಾದ ಗೊತ್ತುವಳಿಗಳಲ್ಲಿ ಎರಡು ಮುಖ್ಯವಾದವು. ಮೊದಲನೆಯ ಗೊತ್ತುವಳಿ ರಾಜ್ಯದಲ್ಲಿ ಬೇಗನೆ ಗ್ರಂಥಾಲಯ ಕಾಯದೆಯೊಂದನ್ನು ತರಬೇಕೆಂದು ರಾಜ್ಯ ಸರಕಾರವನ್ನು ಒತ್ತಾಯ ಪಡಿಸಿದರೆ, ಎರಡನೆಯ ಗೊತ್ತುವಳಿ ನವ ಮೈಸೂರೆಲ್ಲವನ್ನೊಳಗೊಂಡು ಹೊಸ 'ಅಖಿಲ ಕರ್ನಾಟಕ ಗ್ರಂಥಾಲಯ ಸಂಘ'ವೊಂದನ್ನು

ಸ್ಥಾಪಿಸಿ ಅದಕ್ಕಾಗಿ ಕರಡೊಂದನ್ನು ಸಿದ್ಧಪಡಿಸಲು ಉಪಸಮಿತಿ ಯೊಂದನ್ನು ನೇಮಿಸಿತು.

ಇಷ್ಟರಲ್ಲಿಯೇ ಅಂದರೆ ೧೯೬೨ರ ಆಗಸ್ಟ ತಿಂಗಳಲ್ಲಿ ಪದ್ಮಶ್ರೀ ಎಸ್. ಆರ್. ರಂಗನಾಥನ್ ಅವರ ನೇತೃತ್ವದಲ್ಲಿ ಬೆಂಗಳೂರು ಮಹಾನಗರದಲ್ಲಿ ಮೈಸೂರು ಗ್ರಂಥಾಲಯ ಸಂಘ (Mysore Library Association) ಸ್ಥಾಪಿತವಾಗಿ ವಿಶೇಷ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದೆ. ಈ ಸಂಘದ ಸದ್ಯದ ಪ್ರಭಾವಿ ಅಧ್ಯಕ್ಷರು ಮಾನ್ಯ ಶ್ರೀ ವೈಕುಂಠ ಬಾಳಿಗಾ ಅವರು ಆಗಿದ್ದಾರೆ.

ನವಕರ್ನಾಟಕದಲ್ಲಿ ಬೇರೆ ಬೇರೆ ನಾಲ್ಕು ರಾಜ್ಯಗಳಲ್ಲಿದ್ದ ಭಾಗಗಳು ಸೇರಿಕೊಂಡಿವೆ. ಈ ಎಲ್ಲ ಭಾಗಗಳಲ್ಲಿಯೂ ಭಿನ್ನ ಭಿನ್ನವಾದ ಅಪೂರ್ಣವಾದ ಗ್ರಂಥಾಲಯ ಸೇವೆಯ ವ್ಯವಸ್ಥೆಗಳಿವೆ. ಈ ಎಲ್ಲವುಗಳನ್ನೂ ಸಮೀಕರಿಸಿ ಒಂದು ಪರಿಪೂರ್ಣವಾದ ಗ್ರಂಥಾಲಯ ಸೇವೆಯನ್ನು ರಾಜ್ಯಸರಕಾರ ಜನತೆಗೆ ನೀಡುವ ಉದ್ದೇಶದಿಂದ ರಾಜ್ಯದ ಎಲ್ಲ ಭಾಗ-ಗಳಿಗೂ ಸಮವಾಗಿ ಅನ್ವಯಿಸುವಂತಹ ಕಾಯ್ದೆಯೊಂದನ್ನು ಕಾರ್ಯಗತ ಮಾಡಿದೆ.

ನವ ಮೈಸೂರ ರಾಜ್ಯದಲ್ಲೀಗ ೧೦ ಸಾವಿರ ಗ್ರಾಮೀಣ ಗ್ರಂಥಾಲಯಗಳಿವೆ. ಇದಲ್ಲದೆ ಸ್ವತಃ ಸರಕಾರವೇ ನಡೆಸಿ-ಕೊಂಡು ಬರುತ್ತಿರುವ ಗ್ರಂಥಾಲಯಗಳಲ್ಲಿ ಎರಡು ಮುಖ್ಯ

ವಾಗಿವೆ. ಮೊದಲನೆಯದು ಮಡಿಕೇರಿಯಲ್ಲಿರುವ ಸಾರ್ವ-ಜನಿಕ ವಾಚನಾಲಯ; ಎರಡನೆಯದು ಶಿಕ್ಷಣ ಶಾಖೆಯ ಡೈರೆಕ್ಟರರ ಕಚೇರಿಯಲ್ಲಿಯ ಶೈಕ್ಷಣಿಕ ಗ್ರಂಥಾಲಯ. ರಾಜ್ಯದ ಶೈಕ್ಷಣಿಕ ಸಂಶೋಧನ ಸಂಸ್ಥೆಯ (Bureau of Educational Research) ಅಂಗವಾಗಿ ಇನ್ನೊಂದು ಗ್ರಂಥಾಲಯವನ್ನು ರಾಜ್ಯ ಸರಕಾರ ತೆರೆದಿದೆ.

ರಾಜ್ಯದಲ್ಲಿ ನಾಲ್ಕು ವಿಶ್ವವಿದ್ಯಾಲಯ ಗ್ರಂಥಾಲಯಗಳೂ (ಕರ್ನಾಟಕ ವಿಶ್ವವಿದ್ಯಾಲಯ, ಮೈಸೂರು ವಿಶ್ವವಿದ್ಯಾಲಯ, ಬೆಂಗಳೂರು ವಿಶ್ವವಿದ್ಯಾಲಯ ಹಾಗೂ ಮೈಸೂರು ಒಕ್ಕಲು-ತನ ವಿಶ್ವವಿದ್ಯಾಲಯ), ೭೭ ಕಾಲೇಜು ಗ್ರಂಥಾಲಯಗಳೂ ಇವೆ.

ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಶಾಖೆಯವರು ೧೯೫೫ ರಿಂದ ಸಂಚಾರಿ ವಾಚನಾಲಯದ ಯೋಜನೆಯೊಂದನ್ನು ಕೆಲವೊಂದು ಹಳ್ಳಿಗಳಲ್ಲಿ ಜಾರಿಗೆ ತಂದು ಈ ದಿಶೆಯಲ್ಲಿ ಹೊಸದೊಂದು ಹೆಜ್ಜೆಯನ್ನು ಹಾಕಿದ್ದಾರೆ.

ಮೈಸೂರಿನ ವಯಸ್ಕರ ಶಿಕ್ಷಣ ಸಮಿತಿಯವರು ಹಳ್ಳಿಗಳಿಗೆ ಸಲ್ಲಿಸುತ್ತಿರುವ ಗ್ರಂಥಾಲಯಸೇವೆಯು ಜನಾನು-ರಾಗವನ್ನು ಸಂಪಾದಿಸಿದೆ.

ಸಾರ್ವಜನಿಕ ಗ್ರಂಥಾಲಯಗಳಿಗಾಗಿ ಸದ್ಯ ಸರಕಾರ ೫ ಲಕ್ಷ ರೂಪಾಯಿ ವೆಚ್ಚ ಮಾಡುತ್ತಿದೆ. ಗ್ರಂಥಾಲಯ ಕಾಯದೆ ಕಾರ್ಯಗತವಾದ ನಂತರ ಈ ವೆಚ್ಚ ೪೦ ಲಕ್ಷ ರೂಪಾಯಿಗೂ ಮಿಕ್ಕುತ್ತದೆ. ಗ್ರಂಥಾಲಯ ಚಳವಳಿಯ ಬಗ್ಗೆ ರಾಜ್ಯ ಸರಕಾರ ನವ ಮೈಸೂರಿನ ರಚನೆಯಾದಂದಿ-ನಿಂದ ಇನ್ನೂ ಹೆಚ್ಚಿನ ಆಸ್ಥೆ ವಹಿಸಿದೆ.

## ಅಖಿಲ ಭಾರತ ಗ್ರಂಥಾಲಯ ಸಂಘ

## Indian Library Association (I. L. A.)

ಇಲ್ಲಿಯ ವರೆಗೆ ಪ್ರಾಂತೀಯ ಗ್ರಂಥಾಲಯ ಸಂಘ, ಮತ್ತು ಅವುಗಳು ಮಾಡಿದ ಹಾಗೂ ಮಾಡುತ್ತಿರುವ ಕಾರ್ಯ-ವಿಸ್ತಾರದ ವಿಹಂಗಮಾವಲೋಕನ ಮಾಡಿದುದಾಯಿತು. ಇನ್ನು ಅಖಿಲ ಭಾರತ ಗ್ರಂಥಾಲಯ ಸಂಘ ಹೇಗೆ ಹುಟ್ಟಿ ಬಂದಿತು, ಅದು ಕೈಕೊಂಡ ಕೆಲಸಗಳೇನು ಎಂಬು-ದನ್ನು ಸ್ವಲ್ಪದರಲ್ಲಿ ಪರಿಶೀಲಿಸುವದವಶ್ಯ.

ಮೊದಲನೇ ಅಖಿಲ ಭಾರತ ಗ್ರಂಥಾಲಯ ಪರಿಷತ್ತು ಸೇರಿದುದು ೧೯೧೮ ರ ಜನೆವರಿಯಲ್ಲಿ. ಅಂದಿನ ಭಾರತ ಸರಕಾರದ ಶಿಕ್ಷಣಾಧಿಕಾರಿಗಳಾದ ಹೆನ್ರಿ ಶಾರ್ಪ್ ಅವರು ಇದರ ಅಧ್ಯಕ್ಷತೆ ವಹಿಸಿದ್ದರು. ಪರಿಷತ್ತು ಮಾಡಿದ ಮುಖ್ಯ ಕೆಲಸವೆಂದರೆ 'ಅಖಿಲ ಭಾರತ ಗ್ರಂಥಾಲಯ ಸಂಘ'ವನ್ನು ಸ್ಥಾಪಿಸಿದುದು. ಶ್ರೀಗಳಾದ ಕೆ. ಎಮ್. ಅಸದುಲ್ಲಾ

ಎ. ಸಿ. ಉಲ್ನರ, ರೀಚಿ ಮೊದಲಾದವರು ಈ ದಿಶೆಯಲ್ಲಿ ಬಹಳ ಪರಿಶ್ರಮಪಟ್ಟು ಸಂಘವನ್ನು ಬಲಮಾಡಿಕೊಂಡರು. ಆದರೆ ಸಂಘ ಅಲ್ಪಾಯುವಾಗಿತ್ತು. ೧೯೨೦ ರಲ್ಲಿ ಸಂಘವನ್ನು ಕಟ್ಟಲು ಪುನಃ ಪ್ರಯತ್ನ ನಡೆಯಿತು. ದುರ್ದೈವದಿಂದ ಈ ಪ್ರಯತ್ನವೂ ಕೂಡ ಸಫಲವಾಗದೆ ಹೋಯಿತು.

೧೯೩೩ ರ ಸಪ್ಟೆಂಬರ ತಿಂಗಳಲ್ಲಿ ಕಲಕತ್ತೆಯಲ್ಲಿ ನಿಜವಾದ ಅಖಿಲ ಭಾರತ ಗ್ರಂಥಾಲಯ ಪರಿಷತ್ತೊಂದು ಸೇರಿತು. ಪರಿಷತ್ತು ಆಯ್ದುಕೊಂಡ ಮಹತ್ವದ ಕೆಲಸವೆಂದರೆ 'ಅಖಿಲ ಭಾರತ ಗ್ರಂಥಾಲಯ ಸಂಘ'ವನ್ನು ಸ್ಥಾಪಿಸುವದು. ಹಾಗೂ ಹೀಗೂ ಮಾಡಿ ಅದೇ ವರುಷದ ಕೊನೆಗೆ ಮತ್ತೊಮ್ಮೆ 'ಅಖಿಲ ಭಾರತ ಗ್ರಂಥಾಲಯ ಸಂಘ' ವನ್ನು ಕಟ್ಟಿದುದಾಯಿತು. ಇಷ್ಟು ಪರಿಶ್ರಮಪಟ್ಟುಕೊಂಡು ಕಟ್ಟಿದ ಸಂಘ ನಮ್ಮೆಲ್ಲರ ಸುದೈವದಿಂದ ಇಲ್ಲಿಯ ವರೆಗೆ ಒಳ್ಳೆಯ ಸೇವೆ ಸಲ್ಲಿಸುತ್ತ ಬಂದಿದೆ.

೧೯೪೨ ರಿಂದ ಸಂಘ ತ್ರೈಮಾಸಿಕವೊಂದನ್ನು ಹೊರಡಿಸುತ್ತಲಿದೆ. ೧೯೪೨ ರಿಂದ ೧೯೪೭ ರ ವರೆಗೆ 'Library Bulletin', ಎಂದೂ ೧೯೪೯ ರಿಂದ ೧೯೫೩ ರ ವರೆಗೆ 'Abgila', ಎಂದೂ ನಾಮಧೇಯವನ್ನಿಟ್ಟುಕೊಂಡ ಈ ತ್ರೈಮಾಸಿಕವು, ೧೯೫೩ ರಿಂದೀಚೆಗೆ 'Journal of the Indian Library Association' ಎಂದು ಕರೆಯಲ್ಪಡುತ್ತಿದೆ. ಸಂಘವು ಗ್ರಂಥಾಲಯ ಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ

ಗ್ರಂಥಗಳನ್ನು ಪ್ರಕಟಿಸಿದೆ. ೧೯೩೮ ರಲ್ಲಿ 'A Directory of Libraries in India' ಎಂಬ ಸಂದರ್ಭ ಗ್ರಂಥವನ್ನು ಪ್ರಕಟಿಸಿತು. ಈ ಗ್ರಂಥ ೧೯೪೭ ಹಾಗೂ ೧೯೫೧ ಹೀಗೆ ಎರಡು ಸಲ ತಿದ್ದಿ ಬೆಳೆಸಿದ ಆವೃತ್ತಿಯಲ್ಲಿ ಬೆಳಕಿಗೆ ಬರುವ ಸುದೈವ ಕಂಡುಕೊಂಡಿದೆ. ಸಂಘ, UNESCO, F. I. D. I. F. L. A., ಮೊದಲಾದ ಅಂತರರಾಷ್ಟ್ರೀಯ ಸಂಘಗಳೊಡನೆ ಸಹಕರಿಸುತ್ತಿದೆ. ಪ್ರತಿ ಎರಡು ವರ್ಷಕ್ಕೊಮ್ಮೆ ಅಖಿಲ ಭಾರತ ಗ್ರಂಥಾಲಯ ಪರಿಷತ್ತನ್ನು ಕರೆಯುತ್ತದೆ. ದೇಶದಲ್ಲಿಯ ಗ್ರಂಥಾಲಯ ಚಳವಳಿಯ ಸೂತ್ರಧಾರವಾಗಿ ಕೆಲಸ ಮಾಡುತ್ತಿದೆ. ಗ್ರಂಥಾಲಯಗಳ, ಗ್ರಂಥಪಾಲರ ಯೋಗಕ್ಷೇಮ ನೋಡಿಕೊಳ್ಳುತ್ತಿದೆ. ಸಂಘದ ಆಶ್ರಯದಲ್ಲಿ ಇಲ್ಲಿಯ ವರೆಗೆ ೧೫ ಅಖಿಲ ಭಾರತ ಗ್ರಂಥಾಲಯ ಪರಿಷತ್ತುಗಳು ಸೇರಿವೆ. ಇವುಗಳಲ್ಲಿ ಕೊನೆಯ ಪರಿಷತ್ತು, ಅಂದರೆ ೧೫ ನೆಯ ಪರಿಷತ್ತು ೧೯೬೫ ರ ಜೂನ ತಿಂಗಳಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಮೈಸೂರು ಮಹಾನಗರದಲ್ಲಿ ಸೇರಿ ನಾಲ್ಕನೆಯ ಪಂಚವಾರ್ಷಿಕ ಯೋಜನೆಯಲ್ಲಿ ಗ್ರಂಥಾಲಯಗಳ ಅಭಿವೃದ್ಧಿಗಾಗಿ ೮೦ ಕೋಟಿಗೂ ಮಿಕ್ಕಿ ಹಣ ಮೀಸಲಾಗಿರಿಸಬೇಕೆಂದು ಯೋಜನಾ ಆಯೋಗಕ್ಕೆ ಕೇಳಿಕೊಂಡಿತು.

ಸ್ವತಂತ್ರ ಭಾರತದಲ್ಲಿ ಸಂಘ ಸಾಧಿಸಬೇಕಾದ ಕಾರ್ಯ ಹಿಮಾಲಯದಷ್ಟಿದೆ. ಗ್ರಂಥಾಲಯ ಕ್ಷೇತ್ರದಲ್ಲಿ ಪಾಶ್ಚಾತ್ಯ ರಾಷ್ಟ್ರಗಳಿಗಿಂತ ಬಹಳೇ ಹಿಂದುಳಿದಿದ್ದ ಭಾರತವನ್ನು

ಗ್ರಂಥಾಲಯಗಳಾಗರವನ್ನಾಗಿ ಮಾಡುವ ಹೊಣೆ ಈ ಸಂಘದ ಮೇಲಿದೆ. ಸಂಘ ಇನ್ನಷ್ಟು ಸುಸಂಘಟಿತವಾಗಿ, ಬಲಿಷ್ಠ-ವಾಗಿ, ಬೆಳೆಯಬೇಕಾಗಿದೆ. ೪೪ ಕೋಟಿಗೂ ಮಿಕ್ಕಿದ ಭಾರತದ ಪ್ರಜರಲ್ಲಿ ಇಂದಿಗೆ ಈ ಸಂಘದ ಸದಸ್ಯರು ಕೇವಲ ೨೦೦ ಜನ ಮಾತ್ರ! ಅದೇ ೨೦ ಕೋಟಿ ಜನಸಂಖ್ಯೆಯಿರುವ ಅಮೇರಿಕೆಯಲ್ಲಿ, 'ಅಮೇರಿಕೆಯ ಗ್ರಂಥಾಲಯ ಸಂಘ' ದ ಸದಸ್ಯರ ಸಂಖ್ಯೆ ೨೬ ಸಾವಿರಕ್ಕೂ ಮಿಕ್ಕಿದೆ.

ಈ ಮೇಲಿನ ಸಿಂಹಾವಲೋಕನದಿಂದ ಭಾರತದಲ್ಲಿ ಗ್ರಂಥಾಲಯ ಚಳವಳಿ ಇಲ್ಲಿಯ ವರೆಗೆ ಎಡಹುತ್ತ, ಮುಗ್ಗುತ್ತ ಬಂದಿದೆ ಎಂಬ ಮಾತು ಸ್ಪಷ್ಟವಾಗುವದು ಸಹಜ. ಪರಕೀಯರ ಆಡಳಿತ, ನಮ್ಮ ಅಜ್ಞಾನ, ನಿರಕ್ಷರತೆ, ದಾರಿದ್ರ್ಯ ಇವೆಲ್ಲ ಈ ದಿಶೆಯಲ್ಲಿ ಪ್ರಗತಿ ಸಾಧಿಸದಿರುವದಕ್ಕೆ ಕಾರಣಗಳಾಗಿವೆ.

# ೬. ಇಂದು-ಮುಂದು

ಈ ಪ್ರಸಂಗದಲ್ಲಿ ಗ್ರಂಥಾಲಯ ಸೇವೆಯ ಕ್ಷೇತ್ರದಲ್ಲಿ ಸ್ವತಂತ್ರ ಭಾರತ ಕಳೆದ ೧೮ ವರ್ಷಗಳಲ್ಲಿ ಸಾಧಿಸಿರುವ, ಇನ್ನು ಮುಂದೆ ಸಾಧಿಸಬೇಕೆಂದಿರುವ ಸಾಹಸಗಳ ಸಮೀಕ್ಷಣೆ ಕೈಕೊಳ್ಳುವದು ವಿಹಿತವಾಗಿದೆ.

ಇಡೀ ಭಾರತದ ತುಂಬೆಲ್ಲ ಪ್ರಜಾಸತ್ತೆಯ ಆಧಾರಸ್ತಂಭಗಳೆನಿಸುವ, ಒಳ್ಳೆಯ ಸುಸಜ್ಜಿತವಾದ ಗ್ರಂಥಾಲಯಗಳ ಮಾಲೆಯನ್ನೇ ಹರಡಿಸಿ ಬಿಡಬೇಕೆಂದು ಸ್ವತಂತ್ರ ಭಾರತದ ಸರಕಾರ ತವಕಿಸುತ್ತಿದೆ. ಆದರೆ ಆದರ ಮಾರ್ಗದಲ್ಲಿ ಅನೇಕ ಎಡರು-ತೊಡರುಗಳಿವೆ. ಇವುಗಳಲ್ಲಿ ಮುಖ್ಯವಾದವುಗಳು :

೧) ನಿರಕ್ಷರತೆ
೨) ದಾರಿದ್ರ್ಯ
೩) ಪುಸ್ತಕಗಳ ಬರಗಾಲ
೪) ಹಲವಾರು ಭಾಷೆಗಳು

೧: ಸರಕಾರ ಇವೆಲ್ಲ ತೊಡರುಗಳನ್ನು ತೊಡೆದು ಹಾಕುವ ಸದುದ್ದೇಶದಿಂದ ಹಲವಾರು ಯೋಜನೆಗಳನ್ನು ಕೈಕೊಂಡಿದೆ. ಪ್ರಜಾತಂತ್ರದ ಹೆದ್ದಾರಿಯನ್ನರಸಿಕೊಂಡು

ಹೊರಟ ಭಾರತ, ಪ್ರಜಾತಂತ್ರ ಯಶಸ್ವಿಯಾಗಬೇಕಾದರೆ ಪ್ರತಿಯೊಬ್ಬ ಪ್ರಜೆಯೂ ಓದು ಬರೆಯಲು ಬಲ್ಲವನಾಗಿರಬೇಕು, ಸರ್ವ ಸಾಮಾನ್ಯ ಸಂಗತಿಗಳನ್ನು ಅರಿತವನಾಗಿರಬೇಕು, ಎಂದು ಮನವರಿಕೆ ಮಾಡಿಕೊಂಡಿದೆ.

ಅದಕ್ಕಾಗಿಯೇ ಸ್ವತಂತ್ರ ಭಾರತದ ರಾಜ್ಯಘಟನೆಯ ನಿರ್ಮಾಪಕರು ದೇಶದಲ್ಲಿಯ ಪ್ರತಿಯೊಂದು ರಾಜ್ಯವು ೧೯೬೧ ರೊಳಗಾಗಿ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯವಾಗಿ ಮಾಡಬೇಕೆಂದು ವಿಧಿಸಿದರು. ಈ ವ್ಯವಸ್ಥೆಯಿಂದ ದೇಶದಲ್ಲಿಯ ಪ್ರತಿಯೊಂದು ಮಗುವು ಶಾಲೆಗೆ ಸೇರಲೇಬೇಕು. ಮತ್ತು ತನ್ನ ವಯಸ್ಸಿನ ೧೪ ನೇ ವರುಷದ ವರೆಗೆ ಪಾಠ ಓದಲೇಬೇಕು. ಹೀಗಾಗಿ ೧೯೮೦ ರಲ್ಲಿ ಸಮಗ್ರ ಭಾರತದಲ್ಲಿ ಸಾಕ್ಷರಿಗಳ ಹೊಸದೊಂದು ಜನಾಂಗವೇ ತಯಾರಾಗುವದು. ಈ ಎಲ್ಲ ಸಾಕ್ಷರಿಗಳಿಗೆ ಅವರು ಶಾಲೆ ಬಿಟ್ಟ ಬಳಿಕ ಮತ್ತೆ ನಿರಕ್ಷರಿಗಳಾಗದಂತೆ ನೋಡಿಕೊಳ್ಳಲು ಸಹಸ್ರಾರು ಗ್ರಂಥಾಲಯಗಳು ಅವಶ್ಯವಾಗಿ ಬೇಕಾಗುವವು.

ಆದರೆ....? ೧೯೫೧ ರಲ್ಲಿ ಭಾರತ ಸರಕಾರದವರು ಪ್ರಸಿದ್ಧಿಸಿದ 'Libraries in India' ದಲ್ಲಿ ಒಟ್ಟು ೧೧೬೬ ಗ್ರಂಥಾಲಯಗಳ ಉಲ್ಲೇಖ ಮಾಡಲಾಗಿದೆ. ಇವುಗಳಲ್ಲಿ ಕೇವಲ ೩೪೮ ಗ್ರಂಥಾಲಯಗಳನ್ನು ಮಾತ್ರ ಸಾರ್ವಜನಿಕ ವಾಚನಾಲಯಗಳೆಂದು ಹೇಳಲಾಗಿದೆ. (೧೯೫೪ ರಲ್ಲಿ ಕೈಕೊಂಡ ಮತ್ತೊಂದು ಸಮೀಕ್ಷಣೆಯಲ್ಲಿ ದೇಶದಲ್ಲಿ ಒಟ್ಟು

೩೨,೦೦೦ ಗ್ರಂಥಾಲಯಗಳಿವೆಯೆಂದು ಕಂಡು ಬಂದಿದೆ. ಇದರಲ್ಲಿ ಗ್ರಂಥಾಲಯ ಎಂಬ ಹೆಸರಿಗೆ ಯೋಗ್ಯವಾದವು, ಭಾರತ ಸರಕಾರದ 'Libraries in India' ದಲ್ಲಿ ಉಲ್ಲೇಖಿಸಿದವುಗಳಷ್ಟೇ ಎಂದು ಧೈರ್ಯವಾಗಿ ಹೇಳಬಹುದು).

ಇದರಿಂದ ಗ್ರಂಥಾಲಯ ಕ್ಷೇತ್ರದಲ್ಲಿ ದೇಶ ಎಷ್ಟು ದೀನವಾಗಿದೆ, ದರಿದ್ರವಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ದೇಶದಲ್ಲಿಯ ಸದ್ಯದ ೨೪% ಸಾಕ್ಷರರಿಗೆ ಸಾಕಾಗುವಷ್ಟು ಗ್ರಂಥಾಲಯ ಸೌಕರ್ಯಗಳನ್ನು ಒದಗಿಸಿಕೊಡುವದೇ ಗುಡ್ಡದಷ್ಟು ಕೆಲಸವಾಗಿರುವಾಗ ೧೯೮೦ ರಲ್ಲಿ ಸಾಕ್ಷರರಾಗಿ ಗ್ರಂಥಾಲಯ ಸೇವೆಗಾಗಿ ಕಾತರ ಬಡುವ ಜನ ಸಮೂಹಕ್ಕೆ ಗ್ರಂಥಾಲಯ ಸೌಕರ್ಯಗಳನ್ನು ಒದಗಿಸುವ ಕಾರ್ಯ ಹಿಮಾಲಯದಷ್ಟು ಘನವಾದುದಲ್ಲವೇ? ಈ ದಿಶೆಯಲ್ಲಿ ನಿರಂತರ ಚಿಂತನ ಮಾಡುತ್ತಿರುವ ಪದ್ಮಶ್ರೀ ಡಾ. ರಂಗನಾಥನ್ನರು ೧೯೮೦ರಷ್ಟೊತ್ತಿಗೆ ತಯಾರಾಗುವ ಈ ಸಾಕ್ಷರರ ಸಮೂಹಕ್ಕೆ ಗ್ರಂಥಾಲಯ ಸೇವೆ ಪೂರೈಸುವದಕ್ಕೋಸ್ಕರ ಒಂದು ರಾಷ್ಟ್ರೀಯ ಕೇಂದ್ರ ಗ್ರಂಥಾಲಯ, ೨೨ ರಾಜ್ಯ ಕೇಂದ್ರ ಗ್ರಂಥಾಲಯಗಳು, ೧೫೪ ಪಟ್ಟಣ ಕೇಂದ್ರ ಗ್ರಂಥಾಲಯಗಳು, ೭೨೨ ಪಟ್ಟಣ ಶಾಖೆಗಳು, ೩೭೩ ಗ್ರಾಮೀಣ ಕೇಂದ್ರಗಳು, ೪೧೦೦ ಗ್ರಾಮೀಣ ಶಾಖಾ ಗ್ರಂಥಾಲಯಗಳು, ೧೩,೧೦೭ ಗಾಲಿಯ ಗ್ರಂಥಾಲಯ ಗಳು ಹಾಗೂ ೨೬೮,೩೬೧ ಬಿತ್ತರಣೆಯ ಕೇಂದ್ರಗಳು

ಅವಶ್ಯವಾಗಿ ಇರಲೇಬೇಕೆಂದು ಸೂಚಿಸಿದ್ದಾರೆ.

೨. ದೇಶದಲ್ಲಿಯ ದಾರಿದ್ರ್ಯವನ್ನು ಹೊರದೂಡುವ, ದೇಶವನ್ನು ಸಮೃದ್ಧ ಮಾಡುವ, ಮತ್ತು ಜನತೆಯ ಜೀವನಮಟ್ಟವನ್ನು ಎತ್ತರಿಸುವ ಉದ್ದೇಶದಿಂದ ಸರಕಾರ ಪಂಚವಾರ್ಷಿಕ ಯೋಜನೆಗಳನ್ನು ಕಾರ್ಯಾಚರಣೆಯಲ್ಲಿ ತಂದಿದೆ. ಮೂರನೇ ಪಂಚವಾರ್ಷಿಕ ಯೋಜನೆ ಇದೀಗ ಮುಗಿದು ನಾಲ್ಕನೆಯದು ಕಾಲಿಟ್ಟಿದೆ. ಈ ಮೊದಲಿನ ಮೂರು ಯೋಜನೆಗಳ ಫಲವಾಗಿ ದೇಶ ಪ್ರಗತಿ ಪ್ರಗತಿ ಪಥದಲ್ಲಿ ಭರದಿಂದ ಸಾಗಿದೆ. ಐದನೆಯ ಯೋಜನೆಯ ನಂತರ ಪ್ರತಿಯೊಬ್ಬ ಭಾರತೀಯನ ಈಗಿನ ಸರಾಸರಿ ಆದಾಯ ಇಮ್ಮಡಿಗೊಳ್ಳುವದೆಂದು ಊಹಿಸಲಾಗಿದೆ. ಅನತಿ ದೂರದಲ್ಲಿ ಭಾರತದ ಸಮಸ್ತ ಜನ ದಾರಿದ್ರ್ಯದಿಂದ ದೂರಾಗುವರೆಂಬುವ ವಿಷಯದಲ್ಲಿ ಭರವಸೆಯಿದೆ.

೩. ಭಾರತದಲ್ಲಿ ೩೨,೦೦೦ ಗ್ರಂಥಾಲಯುಗಳಿವೆಯೆಂದು ಮೇಲೆ ಹೇಳಿದೆಯಷ್ಟೇ. ಈ ಎಲ್ಲ ಗ್ರಂಥಾಲಯುಗಳಲ್ಲಿ ಕೇವಲ ೭೧ ಲಕ್ಷ ಗ್ರಂಥಸಂಗ್ರಹವಿದೆ. ಅಮೇರಿಕೆಯ ಲೈಬ್ರರಿ ಆಫ್ ಕಾಂಗ್ರೆಸ್ (Library of Congress) ಒಂದರಲ್ಲಿಯೇ ೪ ಕೋಟಿಗೂ ಮಿಕ್ಕಿ ಗ್ರಂಥಗಳಿವೆಯೆಂಬುದನ್ನು ನಾವು ಗಮನಕ್ಕೆ ತೆಗೆದುಕೊಂಡಾಗ ನಮ್ಮ ದೇಶದಲ್ಲಿಯ ಗ್ರಂಥ ದಾರಿದ್ರ್ಯ ನಮಗೆ ತಿಳಿಯುವ-

ನ್ನುಂಟು ಮಾಡದಿದ್ದೀತೇ? ಗ್ರಂಥಗಳ ಈ ಬರಗಾಲವನ್ನು ತೊಡೆದು ಹಾಕುವದರಲ್ಲಿ ಸರಕಾರ ಆಸ್ಥೆ ವಹಿಸಿದೆ. ದೇಶದಲ್ಲಿಯ ಅನೇಕ ಭಾಷೆಗಳಲ್ಲಿ ಒಳ್ಳೆಯ ಗ್ರಂಥಗಳು ಪ್ರಸಿದ್ಧವಾಗಬೇಕಾದರೆ ಮೊದಲು ಆ ಎಲ್ಲ ಭಾಷೆಗಳು ಪ್ರೌಢಾವಸ್ಥೆಗೆ ಬರಬೇಕು. ಮಿಂಚಿನ ವೇಗದಲ್ಲಿ ಮುನ್ನುಗ್ಗಿ ನಡೆದ ವಿಜ್ಞಾನ ಕ್ಷೇತ್ರದಲ್ಲಿ ನಮ್ಮ ದೇಶೀ ಭಾಷೆಗಳು ಬಹಳಷ್ಟು ಬಡವಾಗಿವೆ. ವೈಜ್ಞಾನಿಕ ವಿಷಯಗಳನ್ನು ಕುರಿತು ಈ ಭಾಷೆಗಳಲ್ಲಿ ಗಣ್ಯವಾದ ಗ್ರಂಥಗಳೇ ಇಲ್ಲವೆಂಬ ಮಾತನ್ನು ನಾವು ಒಪ್ಪಲೇಬೇಕು.

ಭಾರತೀಯ ಭಾಷೆಗಳ ಇಲ್ಲಿಯ ವರೆಗಿನ ಸಾಹಿತ್ಯ ಸಮೃದ್ಧಿಯನ್ನೂ, ಅವುಗಳ ಶಕ್ತ್ಯಾಶಕ್ತತೆಗಳನ್ನೂ ಕಂಡು ಕೊಳ್ಳುವ ಉದ್ದೇಶದಿಂದ ಸಾಹಿತ್ಯ ಅಕಾಡೆಮಿಯವರು ೧೯೫೬ರಲ್ಲಿ ದಿಲ್ಲಿಯಲ್ಲಿ ಈ ಎಲ್ಲ ಭಾಷೆಗಳಲ್ಲಿಯ ಉತ್ಕೃಷ್ಟ ಗ್ರಂಥಗಳ ಪ್ರದರ್ಶನವೊಂದನ್ನು ಏರ್ಪಡಿಸಿದ್ದರು. ಜ್ಞಾನ ಮತ್ತು ವಿಜ್ಞಾನ ವಿಷಯಗಳಲ್ಲಿ ಈ ಎಲ್ಲ ಭಾಷೆಗಳು ಎಷ್ಟೊಂದು ಬಡವಾಗಿವೆಯೆಂಬುದು ಈ ಪ್ರದರ್ಶನ ಮಾತ್ರ-ದಿಂದ ಬಹಳೇ ಸ್ಫುಟವಾಗಿ ಕಂಡು ಬಂದಿತು.

ಆಯಾ ಭಾಷೆಗಳಲ್ಲಿಯ ಶ್ರೇಷ್ಠ ಲೇಖಕರಿಗೆ ಪ್ರೋತ್ಸಾಹನವನ್ನು ಕೊಟ್ಟು ಅವುಗಳಲ್ಲಿನ ಉತ್ತಮ ಗ್ರಂಥಗಳನ್ನು ಇನ್ನುಳಿದ ದೇಶೀ ಭಾಷೆಗಳಲ್ಲಿ ರೂಪಾಂತರಿಸಿ ಸಾಹಿತ್ಯ

ಅಕಾಡೆಮಿ ಗ್ರಂಥಗಳ ಕೊರತೆಯನ್ನು ನೀಗಿಸಲಿಕ್ಕೆ ಸಾಹಸ ಬಡುತ್ತಿದೆ.

ಇದಲ್ಲದೆ ೧೯೫೭ರಲ್ಲಿ ಸ್ಥಾಪಿತವಾದ ನ್ಯಾಶನಲ್ ಬುಕ್‌ಟ್ರಸ್ಟ ಆಫ್ ಇಂಡಿಯಾ, ಈ ದಿಶೆಯಲ್ಲಿ ಇನ್ನೂ ಮಹ-ತ್ತರವಾದ ಕಾರ್ಯ ಮಾಡಲಿದೆ. ಡಾ. ಬಿ. ವ್ಹಿ. ಕೇಸಕರ ರಂತಹ ಪ್ರತಿಭಾವಂತ ಮಹನೀಯರು ಅಧ್ಯಕ್ಷರಾಗಿರುವ ಈ ಟ್ರಸ್ಟಿನ ಉದ್ದೇಶಗಳಲ್ಲಿ ಕೆಳಗಿನವುಗಳು ಮುಖ್ಯವಾಗಿವೆ.

ಅ. ಭಾರತದ ಪ್ರಾಚೀನ ಕಾಲದ ಶ್ರೇಷ್ಠ ಸಾಹಿತ್ಯ ವನ್ನು, ಪರಭಾಷೆಗಳಲ್ಲಿನ ಉತ್ತಮೋತ್ತಮ ಗ್ರಂಥಗಳನ್ನು ಭಾರತೀಯ ಭಾಷೆಗಳಲ್ಲಿಯ ಗಣ್ಯಗ್ರಂಥಗಳನ್ನು, ಆಧುನಿಕ ಬರಹಗಾರರ ಒಳ್ಳೆಯ ಗ್ರಂಥಗಳನ್ನು, ದೊಡ್ಡ ಆವೃತ್ತಿಯಲ್ಲಿ ಆದರೆ ಸುಲಭ ಬೆಲೆಯಲ್ಲಿ ಇದ್ದಕ್ಕಿದ್ದಂತೆಯೇ ಅಥವಾ ರೂಪಾಂತರಿಸಿ ಪ್ರಕಟಿಸುವದು.

ಆ. ಬರಹಗಾರರ, ಗ್ರಂಥಪಾಲರ, ಪ್ರಕಾಶಕರ ಪುಸ್ತಕ ವ್ಯಾಪಾರಿಗಳ ಸಮ್ಮೇಳನಗಳನ್ನೇರ್ಪಡಿಸುವದು.

ಇ. ಗ್ರಂಥ ಸೂಚಿಗಳನ್ನು ಪ್ರಕಟಿಸುವದು, ಪ್ರದ-ರ್ಶನಗಳನ್ನು ಜರುಗಿಸುವದು ಮುಂತಾದವುಗಳು.

ದೇಶದಲ್ಲಿಯ ಸುಶಿಕ್ಷಿತರು ಚಾತಕ ಪಕ್ಷಿಗಳಂತೆ ಈ ಟ್ರಸ್ಟು ಕರೆಯಲಿರುವ ಪುಸ್ತಕ-ವೃಷ್ಟಿಯ ಧಾರೆಗಾಗಿ ಬಾಯ್ದೆರೆದೇ ಕಾದಿದ್ದಾರೆ.

ಈ ಸಂಸ್ಥೆಗಳನ್ನಲ್ಲದೆ ಭಾರತ ಸರಕಾರ ಮಕ್ಕಳ ಸಾಹಿತ್ಯಾಭಿವೃದ್ಧಿಗಾಗಿ ಮತ್ತೊಂದು ವಿಶೇಷ ಸಮಿತಿಯನ್ನು ನೇಮಿಸಿದೆ. ಶಾಲೆ ಕಾಲೇಜುಗಳ ಪಠ್ಯ ಪುಸ್ತಕಗಳ ಬಗ್ಗೆ ಕೂಡ ಸರಕಾರ ಆಸ್ಥೆ ತಳೆದಿದೆ.

ರೂಪಾಯಿ ಅಪಮೌಲ್ಯಗೊಂಡ ನಿಮಿತ್ತದಿಂದ ವಿದೇಶಿ ಗ್ರಂಥಗಳ ಬೆಲೆ ಇಮ್ಮಡಿಗೊಂಡಿದೆ. ಇದರ ಪರಿಣಾಮ-ವಾಗಿ ಉಚ್ಚ ಶಿಕ್ಷಣಸಂಸ್ಥೆಗಳ ಗ್ರಂಥ ಹಾಗೂ ನಿಯತ ಕಾಲಿಕೆಗಳ ಶೇಖರಣೆಯ ಕಾರ್ಯಕ್ರಮಕ್ಕೆ ದೊಡ್ಡ ಆಘಾತ ವುಂಟಾಗಿದೆ. ಇಂಥ ಸಂಸ್ಥೆಗಳು ಕೊಂಡುಕೊಳ್ಳುವ ಗ್ರಂಥ ಹಾಗೂ ನಿಯತಕಾಲಿಕೆಗಳಲ್ಲಿ ನೂರಕ್ಕೆ ೮೦ ರಷ್ಟು ಗ್ರಂಥಗಳು ಹಾಗೂ ನಿಯತಕಾಲಿಕೆಗಳು ಪರದೇಶದಿಂದ ಆಮದು ಮಾಡಲ್ಪಟ್ಟವಿರುತ್ತವೆ. ರೂಪಾಯಿಯ ಅಪ-ಮೌಲ್ಯದ ಪರಿಣಾಮವಾಗಿ ಗ್ರಂಥಗಳ ಕೊರತೆ ಇನ್ನಷ್ಟು ಕಠೋರವಾಗಲಿದೆ. ಈ ದುರ್ಧರ ಪ್ರಸಂಗವನ್ನೆದುರಿಸಲು ಭಾರತ ಸರಕಾರ ರಾಷ್ಟ್ರೀಯ ಗ್ರಂಥ ಅಭಿವೃದ್ಧಿ ಮಂಡಳಿ-ಯೊಂದನ್ನು (National Book Development Council) ಸ್ಥಾಪಿಸಲು ಯೋಚಿಸುತ್ತಿದೆ.

ಸರಕಾರದ ಈ ಸ್ತುತ್ಯವಾದ ಪ್ರಯತ್ನಗಳಿಗೆ ಆಸರೆ ಗೊಡುವದಕ್ಕೆಂದು ಕೆಲವು ಪ್ರಕಾಶಕರು, ಸಂಘ-ಸಂಸ್ಥೆ-ಗಳು ಸ್ವಯಂಸ್ಫೂರ್ತಿಯಿಂದ ಮುಂದೆ ಬಂದಿವೆ. ಇಂಥವು-ಗಳ ಬಳಗ ಬಹು ವಿಶಾಲವಾಗಿದೆ. ಇಲ್ಲಿ ಮಾತ್ರ ಇಂಥ ಒಂದೇ ಒಂದು ಸಂಸ್ಥೆಯ ಪರವಾಗಿ ಹೇಳಿದ್ದಾಗಿದೆ.

## ದಕ್ಷಿಣ ಭಾರತದ ಪುಸ್ತಕೋದ್ಯಮ ಸಂಸ್ಥೆ ಹಾಗೂ ದಕ್ಷಿಣ ಭಾಷೆಗಳ ಪುಸ್ತಕನಿಧಿ

ಇವೆರಡೂ ಸಂಸ್ಥೆಗಳು ಇತ್ತೀಚೆಗೆ ಫೋರ್ಡ್ ಫೌಂಡೇಶನ್‌ದವರ ಸಹಾಯದಿಂದ ಹುಟ್ಟಿದವು. ದಕ್ಷಿಣ ಭಾರತದ ಪ್ರಮುಖ ಭಾಷೆಗಳಾದ ಮಲೆಯಾಳಮ್, ತೆಲುಗು ತಮಿಳು ಮತ್ತು ಕನ್ನಡ ಇವುಗಳಲ್ಲಿಯ ಪುಸ್ತಕಗಳ ಬರವನ್ನು ಹೊಡೆದೋಡಿಸಲು ಇವೆರಡೂ ಸಂಸ್ಥೆಗಳು ಟೊಂಕ ಕಟ್ಟಿ ಕೆಲಸ ಮಾಡುತ್ತಿವೆ.

ಪುಸ್ತಕೋದ್ಯಮ ಸಂಸ್ಥೆಯ ಹಲವಾರು ಪ್ರಶಂಸನೀಯ ಧ್ಯೇಯಗಳಲ್ಲಿ ಕೆಳಗಿನವುಗಳು ಗಮನಾರ್ಹವಾಗಿವೆ.

ಅ. ಪುಸ್ತಕ ವ್ಯಾಪಾರಿಗಳಿಗೆ ಹಾಗೂ ಪ್ರಕಾಶಕರಿಗೆ ಗ್ರಂಥಗಳನ್ನು ಬರೆಯಿಸುವದಕ್ಕೆ ವಿಷಯಗಳನ್ನು ಆರಿಸುವದರಲ್ಲಿ, ಗ್ರಂಥಗಳನ್ನು ಪ್ರಕಟಿಸುವ ವಿಷಯದಲ್ಲಿ ಹಾಗೂ ಅವುಗಳ ಜಾಹೀರಾತಿನ ವಿಷಯದಲ್ಲಿ ಸೇವೆ, ಸಹಾಯ, ಹಾಗೂ ಸಹಕಾರಗಳನ್ನು ಸಲ್ಲಿಸುವದು.

ಆ. ಜನಸಾಮಾನ್ಯರಲ್ಲಿ ಒಳ್ಳೇ ಪುಸ್ತಕಗಳ ಬಗ್ಗೆ ಅಭಿರುಚಿಯನ್ನುಂಟುಮಾಡುವದು.

ಇ. ಪುಸ್ತಕ ವ್ಯಾಪಾರಿಗಳನ್ನು, ಪ್ರಕಾಶಕರನ್ನು ಮತ್ತು ಹಂಚುವವರನ್ನು ಒಂದೆಡೆ ತರುವದು, ಇತ್ಯಾದಿ ಇತ್ಯಾದಿ.

ಈ ಧ್ಯೇಯಗಳ ಕಾರ್ಯಾಚರಣೆಯ ಉದ್ದೇಶದಿಂದ ಈ ಸಂಸ್ಥೆ "Book News" ಎಂಬ ಮಾಸಿಕವನ್ನು ಹೊರಡಿಸುತ್ತಿದೆ. ಮತ್ತು ದಕ್ಷಿಣ ಭಾರತದಲ್ಲಿ ದೊಡ್ಡ ಪಟ್ಟಣಗಳಲ್ಲಿ ಪ್ರದರ್ಶನದ ಕೊಠಡಿಗಳನ್ನು ತೆರೆದಿಟ್ಟಿದೆ.

ಈ. ಭಾಷೆಗಳ ವಿಪುಲತೆಯಿಂದ ಗ್ರಂಥಾಲಯ ಚಳವಳಿಯ ಪ್ರಗತಿಗೆ ಅಡೆತಡೆಯುಂಟಾಗುತ್ತದೆಂದು ಕೆಲವರ ಸಂದೇಹ. ಆದರೆ ಈ ಸಂದೇಹ ಹುರುಳಿಲ್ಲದ್ದು.

ವಿವಿಧತೆಯೆಂದರೆ ವಿಭಿನ್ನತೆಯಲ್ಲ. ದೇಶದಲ್ಲಿ ಭಾಷೆಗಳ ವಿಪುಲತೆಯಿದ್ದರೇನು? ಅವೆಲ್ಲ ಬೆಳೆದು ಬರಲು ಸರಕಾರ ಮೇಲೆ ಹೇಳಿದ ಸಂಸ್ಥೆಗಳ ಮೂಲಕ ಸಹಾಯ, ಸಲಹೆ, ಸಲಕರಣೆಗಳನ್ನು ನೀಡುತ್ತಿದೆ. ಗ್ರಂಥಾಲಯ ಚಳವಳಿಯಲ್ಲಿ ಹಲವಾರು ಭಾಷೆಗಳು ತೊಡಕಾಗಬೇಕಿಲ್ಲ. ತದ್ವಿರುದ್ಧವಾಗಿ ಅವು ನಮ್ಮ ಚಳವಳಿಗೆ ಕಾಮನ ಬಿಲ್ಲಿನ ರಮ್ಯತೆಯನ್ನು ತಂದುಕೊಡುತ್ತವೆ.

ಇಲ್ಲಿಯ ವರೆಗೆ ಭಾರತದಲ್ಲಿಯ ಗ್ರಂಥಗಳ ಅಭಾವವನ್ನು ನಿವಾರಿಸುವ ಬಗೆಯನ್ನು ಕುರಿತು ಯಾವ ಯಾವ

ಕಾರ್ಯ ನಡೆದಿದೆ ಎಂಬುದನ್ನು ನೋಡಿಯಾಯಿತು. ಇನ್ನು ಗ್ರಂಥಾಲಯ ಕ್ಷೇತ್ರದಲ್ಲಿ ಇಲ್ಲಿಯ ವರೆಗೆ ಏನನ್ನು ಸಾಧಿಸಿದ್ದಾಗಿದೆ, ಇನ್ನೂ ಏನನ್ನು ಗೈಯುವದಿದೆ ಎಂಬುದನ್ನು ವಿಹಂಗಮವಾಗಿ ವೀಕ್ಷಿಸೋಣ.

## ಭಾರತದ ರಾಷ್ಟ್ರೀಯ ಗ್ರಂಥಾಲಯ

## National Library of India

ದೇಶಕ್ಕೆ ಸ್ವಾತಂತ್ರ್ಯ ದೊರೆತ ಪುಣ್ಯ ನವಜೀವನದ ಉದಯದ ಸುಮುಹೂರ್ತದಲ್ಲಿಯೇ ಸ್ವತಂತ್ರ ಭಾರತದ ಸರಕಾರ ಗ್ರಂಥಾಲಯಗಳ ಬಗ್ಗೆ ತಾನು ತಳೆದಿದ್ದ ಆಸ್ಥೆಯ ನಿದರ್ಶನವೆಂದು ಕಲಕತ್ತೆಯಲ್ಲಿದ್ದ 'ಇಂಪೀರಿಯಲ್' ಗ್ರಂಥಾಲಯವನ್ನು ಭಾರತದ 'ರಾಷ್ಟ್ರೀಯ' ಗ್ರಂಥಾಲಯವನ್ನಾಗಿ ಪರಿವರ್ತಿಸಿತು. ಕಳೆದ ಹತ್ತೇ ಹತ್ತು ವರ್ಷಗಳಲ್ಲಿ ಈ ಗ್ರಂಥಾಲಯ ಮಹಾಸಂಸ್ಥೆಯಾಗಿ, ಸ್ವತಂತ್ರ ಭಾರತದ ಕೆಲವೇ ಅದ್ಭುತಗಳಲ್ಲಿ ಒಂದಾಗಿ, ಒಂದು ಪುಣ್ಯ ಕ್ಷೇತ್ರವಾಗಿ ಬೆಳೆದು ಬಂದಿದೆ, ಹೆಮ್ಮೆಯಿಂದ ಮೆರೆಯುತ್ತಿದೆ. ಈ ರೀತಿ ಬಹುಮುಖವಾಗಿ, ಅಗಾಧವಾಗಿ ಈ ಸಂಸ್ಥೆಯನ್ನು ಇಷ್ಟು ಅಲ್ಪ ಸಮಯದಲ್ಲಿ ಬೆಳೆಸಿಕೊಂಡು ಬಂದವರು ಅದರ ಪ್ರಥಮ ಗ್ರಂಥಪಾಲರಾಗಿದ್ದ ಪದ್ಮಶ್ರೀ. ಬಿ. ಎಸ್. ಕೇಶವನ್‌ರು. ಅವರು ಅಚ್ಚ ಕನ್ನಡಿಗರಾಗಿದ್ದಾರೆ.

ಈ ಗ್ರಂಥಾಲಯದ ಉಗಮವನ್ನು ೧೮೩೬ರಲ್ಲಿ ಗುರುತಿಸಬಹುದು. ಕಲಕತ್ತೆಯಲ್ಲಿಯ ಪ್ರಮುಖರಾದ

ದ್ವಾರಕಾನಾಥ, ಟಾಗೋರ, ಪ್ಯಾರಿ, ಚಂದ್ರ, ಮಿತ್ರ ಮೊದ-ಲಾದವರು ನಗರದಲ್ಲಿ ಎಲ್ಲರಿಗೂ ಪ್ರವೇಶವುಳ್ಳ ಗ್ರಂಥಾ-ಲಯವೊಂದನ್ನು ಸ್ಥಾಪಿಸಬೇಕೆಂಬ ಮನೀಷೆಯುಳ್ಳವರಾಗಿ-ದ್ದರು. ಈ ತಮ್ಮ ಕನಸನ್ನು ನನಸನ್ನಾಗಿ ಮಾಡುವ ದಿಶೆಯಲ್ಲಿ ಅವರು ಪಟ್ಟ ಪರಿಶ್ರಮದ ಫಲವಾಗಿ ಈ ಗ್ರಂಥಾಲಯ ಹುಟ್ಟಿ ಬಂದಿತು. ಆದರೆ ಈ ಪ್ರಾರಂಭದ ಉತ್ಸಾಹ, ಹುಮ್ಮಸ್ಸು ಮುಂದೆಯೂ ಉಳಿಯಲಿಲ್ಲವೇನೋ. ಕೆಲವೇ ವರ್ಷಗಳಲ್ಲಿ ಗ್ರಂಥಾಲಯದ ಪರಿಸ್ಥಿತಿ ಕಂಗಾಲಾಗಿ ಬಿಟ್ಟಿತು.

೧೮೯೯ರಲ್ಲಿ ಭಾರತದ ವ್ಹಾಯಿಸರಾಯನಾಗಿ ಮೆರೆ-ಯುತ್ತಿದ್ದ ಕರ್ಝನ್ ಪ್ರಭೃತಿ ಕಲಕತ್ತೆಗೆ ಭೇಟಿ ಇತ್ತ. ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಸಂಸ್ಥೆಗಳಲ್ಲಿ ಆಸ್ಥೆಯುಳ್ಳ ಈತ, ಈ ಗ್ರಂಥಾಲಯಕ್ಕೂ ಸಂದರ್ಶನವಿತ್ತ. ಗ್ರಂಥಾ ಲಯದ ದೀನ ಪರಿಸ್ಥಿತಿಯನ್ನು ನೋಡಿ ಅವನು ತಲ್ಲಣ-ಗೊಂಡಿರಬೇಕು. ಧೂಳಿನ ರಾಶಿಯಿದ್ದ ಶೆಲ್ಫುಗಳಲ್ಲಿಯ ಪುಸ್ತಕಗಳು ತಮ್ಮ ಹೊದಿಕೆಗಳಿಂದ ದೂರವಾಗಿದ್ದವು. ಓದುಗರು ಕೂಡ್ರುವ ಸ್ಥಳದ ಸ್ವಾಮ್ಯ ಅಲ್ಲಿಯೇ ವಾಸವಾಗಿದ್ದ ಪಾರಿವಾಳಗಳದಾಗಿದ್ದಿತು. ಮೂಲೆ ಮೂಲೆಗಳಲ್ಲಿ ಜೇಡ-ಗಳು ತಮ್ಮ ಬಳಗವನ್ನು ಬೆಳೆಯಿಸಿಕೊಂಡು ಹಾಯಾಗಿ ಸುಖದಿಂದ ಇದ್ದವು. ಮಿಂಚಿನ ವೇಗದಿಂದ ಕೆಲಸ ಮಾಡುವ ಕರ್ಝನ್ ಆ ಗ್ರಂಥಾಲಯದ ಸ್ವಾಮ್ಯವನ್ನು

ತಕ್ಷಣ ಕೊಂಡುಕೊಂಡು, ಈಸ್ಟ ಇಂಡಿಯಾ ಕಾಲೇಜ ಲಾಯಬ್ರರಿಗೆ ಅದನ್ನು ಸೇರಿಸಿದ. ಕಲಕತ್ತೆಯಲ್ಲಿಯ ಭಾರತ ಸರಕಾರದ ವಿವಿಧ ಶಾಖೆಗಳ ಗ್ರಂಥಸಂಗ್ರಹಗಳನ್ನು ಇವರೊಡನೆ ಲೀನವಾಗಿಸಿ ಬಿಟ್ಟ. ಇವೆಲ್ಲವುಗಳ ವಿಲೀನೀ-ಕರಣದಿಂದ ಪುಷ್ಟಿಗೊಂಡ ಈ ಗ್ರಂಥ ಸಂಗ್ರಹಕ್ಕೆ "ಇಂಪೀ-ರಿಯಲ್ ಲೈಬ್ರರಿ" ಎಂದು ಕರೆದ. ಅದನ್ನು ಸಾರ್ವ-ಜನಿಕ ಉಪಯೋಗಕ್ಕೆ ೧೯೦೩ ರಲ್ಲಿ ಮುಕ್ತಗೊಳಿಸಿದ. "ಜನ ಬ್ರಿಟಿಷ್ ಮ್ಯೂಜಿಯಮ್ಮಿನ ಗ್ರಂಥಾಲಯವನ್ನು ಅಥವಾ ಆಕ್ಸಫರ್ಡ್‌ದಲ್ಲಿಯ ಬಾಡ್ಲೇಯನ್ ಗ್ರಂಥಾಲಯ-ವನ್ನು ಜ್ಞಾನದಾಹವನ್ನಾರಿಸಿಕೊಳ್ಳಲು ಹೇಗೆ ಮುತ್ತುವರೋ ಹಾಗೆಯೇ ಈ ಗ್ರಂಥಾಲಯದ ಆತಿಥ್ಯವನ್ನು ಕೋರಿ ಬರಬೇಕು" ಎಂಬುದೇ ಕರ್ಝನ್ ಮಹಾಶಯನ ಮಹ-ದಾಶಯವಾಗಿತ್ತು. ಅಂತೆಯೇ ಅವನು ಬ್ರಿಟಿಶ್ ಮ್ಯೂಜಿ-ಯಮ್‌ದಲ್ಲಿ ಕೆಲಸ ಮಾಡುತ್ತಿದ್ದ ಮ್ಯಾಕ್‌ಫರ್ಲೇನ್ ಎಂಬ ಗ್ರಂಥಾಲಯ ಶಾಸ್ತ್ರಜ್ಞನನ್ನು ಕರೆಯಿಸಿ 'ಇಂಪೀರಿಯಲ್ ಲೈಬ್ರರಿ'ಯ ಗ್ರಂಥಪಾಲನನ್ನಾಗಿ ನೇಮಿಸಿದ.

ಸ್ವಾತಂತ್ರ್ಯದ ಅರುಣೋದಯದವರೆಗೆ ಮೆಟಕಾಫ್ ಭವನದಲ್ಲಿ ಸ್ಥಳ ಸಂಕೋಚದಿಂದಾಗಿ ಹಾಗೂ ಹೀಗೂ ಉಸಿರು ಕಟ್ಟಿಕೊಂಡ ಅವಸ್ಥೆಯಲ್ಲಿದ್ದ ಈ ಗ್ರಂಥಾಲಯ ಸ್ವಾತಂತ್ರ್ಯ ದೊರೆತ ಕೆಲವೇ ದಿನಗಳಲ್ಲಿ ಬೆಲ್‌ವೆಡಿಯರ್ ಅರಮನೆಗೆ ಆಗಮಿಸಿತು. ಇಡೀ ಕಲಕತ್ತೆಯಲ್ಲಿಯೇ ವಿಶಾಲವಾದ, ಭವ್ಯವಾದ ಅರಮನೆಯೆನಿಸಿಕೊಂಡಿದ್ದ

ಬೆಲ್‌ವೆಡಿಯರ್ ಭವನ ಇದೀಗ ಗಿರಡೆಸಿಸುವಂತೆ ಈ ಗ್ರಂಥಾಲಯ ಬೆಳೆದಿದೆ ಇಂದಿಗೆ ಇಲ್ಲಿ ೧೩,೭೩೪,೪೫೭ ಗ್ರಂಥಗಳಿವೆ; ೨೫೩೭ ಕ್ಕೂ ಮಿಕ್ಕಿ ಹಸ್ತಪ್ರತಿಗಳಿವೆ; ಒಟ್ಟಿಗೆ ೯೪೯೩ ನಿಯತಕಾಲಿಕೆಗಳು ಬರುತ್ತಿವೆ; ಒಟ್ಟಾರೆ ೫೨೩ ಜನ ಇಲ್ಲಿ ಸರಸ್ವತೀ ಸೇವೆಗೈಯ್ಯುತ್ತಿದ್ದಾರೆ. ಇವರಲ್ಲಿ ೧೪೦ ಜನ ಗ್ರಂಥಾಲಯ ಶಾಸ್ತ್ರದಲ್ಲಿ ತರಬೇತಿ ಹೊಂದಿದವ-ರಾಗಿದ್ದಾರೆ. ೧೯೫೪ ರಲ್ಲಿ Delivery of Books Act ಕಾರ್ಯಗತವಾದ ಮೇಲೆ ೧೯೬೦-೬೧ ರ ಒಂದೇ ವರ್ಷದಲ್ಲಿ ಈ ಗ್ರಂಥಾಲಯಕ್ಕೆ ೧೮,೮೨೫ ಗ್ರಂಥಗಳೂ, ೫೨೮೭ ನಿಯತ ಕಾಲಿಕೆಗಳೂ ಪುಕ್ಕಟೆಯಾಗಿ ಬಂದವು. ಇಂಥ ದಿವ್ಯ ಸರಸ್ವತೀ ಮಂದಿರದಲ್ಲಿ ದಿನವೂ ೯೬೦ ಕ್ಕೂ ಮಿಕ್ಕಿ ಸರಸ್ವತೀ ಉಪಾಸಕರು ಬಂದು ಅವಳ ಆರಾಧನೆಗೈಯುತ್ತಾರೆ. ಭಾರತ ಸರಕಾರ ಈ ಗ್ರಂಥಾಲಯದ ಸಲುವಾಗಿ ರೂ. ೧೪,೭೦,೩೬೫ ಗಳನ್ನು ೧೯೬೦–೬೧ ರಲ್ಲಿ ವೆಚ್ಚಮಾಡಿತು.

ಗ್ರಂಥಾಲಯದಲ್ಲಿ ವಿಶೇಷವಾದ, ಅಮೂಲ್ಯವಾದ ಸಂಗ್ರಹಗಳೂ ಅನೇಕವಿವೆ. ಅರಬ್ಬೀ, ಫಾರಸೀ ಹಾಗೂ ಉರ್ದು ಹಸ್ತಪ್ರತಿ ಹಾಗೂ ಗ್ರಂಥಗಳುಳ್ಳ ವಿಶ್ವವಿಖ್ಯಾತವಾದ 'ಬುಹಾರ್' ಸಂಗ್ರಹ ಇಲ್ಲಿದೆ. ಭಾರತೀಯ ವಿಷಯಗಳಲ್ಲಿ ಎತ್ತಿದ ಕೈಯುಳ್ಳವರಾದ ಥೀಬಾ ಅವರ ಸಂಸ್ಕೃತ ಹಸ್ತ ಲಿಪಿಗಳ ಸಂಗ್ರಹ ಇಲ್ಲಿದೆ. ೭೫ ಸಾವಿರದಷ್ಟು ದೊಡ್ಡದಾದ ಅಶುತೋಷ ಮುಖರ್ಜಿಯವರ ಅದ್ಭುತ ಸಂಗ್ರಹವೂ ಇಲ್ಲಿದೆ.

ಅತಿ ವಿರಳ ಹಾಗೂ ಅಮೂಲ್ಯ ಬಂಗಾಲಿ ಗ್ರಂಥಗಳುಳ್ಳ ರಾಮದಾಸ ಸೂರ ಸಂಗ್ರಹ, ಬೋಲಾರಾಮ ಸಂಗ್ರಹ, ಚೀನಿ ಸಂಗ್ರಹ, ಅಮೇರಿಕೆಗೆ ಸಂಬಂಧ ಪಟ್ಟ ಸಂಗ್ರಹ, ಇಂಥ ಇನ್ನೂ ಅನೇಕ ಶ್ರೇಷ್ಠ ಗ್ರಂಥಸಂಗ್ರಹಗಳಿಲ್ಲಿ ಅಡಕವಾಗಿವೆ. ಗ್ರಂಥಾಲಯದಲ್ಲಿಯ ಗ್ರಂಥಗಳ ಸಂಗ್ರಹಗಳ ಅನೇಕ ಸೂಚಿಪಟ್ಟಿಗಳು ಈಗಾಗಲೇ ಪ್ರಸಿದ್ಧಿಸಲ್ಪಟ್ಟಿವೆ. ಈ ಗ್ರಂಥಾಲಯದ ಆಶ್ರಯದಲ್ಲಿಯೇ ಶ್ರೀ ಕೇಶವನ್‌ರ ಹಿರಿತನದಲ್ಲಿ 'ಭಾರತದ ರಾಷ್ಟ್ರೀಯ ಪುಸ್ತಕ ಪಟ್ಟಿ' (Indian National Bibliography)ಯು ಮೊದಲನೆಯ ಸಂಚಿಕೆ ೧೯೫೮ ರ ೧೫ ನೇ ಆಗಸ್ಟರಂದು ಬೆಳಕು ಕಂಡಿತು. ಈ ಪಟ್ಟಿ ಸದ್ಯ ಮಾಸಿಕವಾಗಿ ಪ್ರಕಟಿಸಲಾಗುತ್ತಲಿದೆ. ಶೀಘ್ರದಲ್ಲಿಯೇ ಅದನ್ನು ಪ್ರತಿವಾರವೂ ಹೊರಡಿಸಲಾಗುವದು. ಈ ಸೂಚಿಯು ಮೂಲಕ ಭಾರತದಲ್ಲಿಯ ಎಲ್ಲ ಭಾಷೆಗಳಲ್ಲಿ ಪ್ರಸಿದ್ಧವಾಗುತ್ತಿರುವ ಪುಸ್ತಕಗಳ ವ್ಯವಸ್ಥಿತವಾದ, ವರ್ಗೀಕೃತವಾದ ಪಟ್ಟಿಯೊಂದು ದೇಶದಲ್ಲಿಯು, ಅದೇಕೆ ವಿಶ್ವದಲ್ಲಿಯು ಪುಸ್ತಕ ಪ್ರೇಮಿಗಳಿಗೆ, ಸಂಶೋಧಕರಿಗೆ, ಗ್ರಂಥಪಾಲರಿಗೆ, ಪ್ರಕಾಶಕರಿಗೆ, ಪುಸ್ತಕ ವ್ಯಾಪಾರಿಗಳಿಗೆ ದೊರಕುವಂತಾಯಿತು!

ದೇಶದ ಮೂಲೆಗಳಲ್ಲಿಂದ ಸಂಶೋಧನೆಗೆಂದು ಇಲ್ಲಿಗೆ ಆಗಮಿಸುವ ಪಂಡಿತರುಗಳಿಗೆ ಸ್ವಲ್ಪೇ ವೆಚ್ಚದಲ್ಲಿ ಹಾಯಾಗಿ ಅವರು ಇರುವಂತೆ ವ್ಯವಸ್ಥೆಯನ್ನು ಮಾಡಲಾಗಿದೆ

ಅಂತೂ 'ಭಾರತದ ರಾಷ್ಟ್ರೀಯ ಗ್ರಂಥಾಲಯ'ಕ್ಕೆ ಇನ್ನೂ ಭವ್ಯತರವಾದ ಭವಿಷ್ಯತ್ತು ಕಾದಿದೆ.

## ದಿಲ್ಲಿಯ ಸಾರ್ವಜನಿಕ ವಾಚನಾಲಯ

( Delhi Public Library )

ಇದೇ ಸಂದರ್ಭದಲ್ಲಿಯೇ ದಿಲ್ಲಿಯ ಸಾರ್ವಜನಿಕ ವಾಚನಾಲಯ:ದ ಬಗ್ಗೆ ಬರೆಯುವದು ಅವಶ್ಯ. ೧೯೪೯ ರಲ್ಲಿ ಸಭೆ ಸೇರಿದ ಯುನೆಸ್ಕೋದ ಸಾಮಾನ್ಯ ಸಭೆಯು ಆದರ್ಶ ಸಾರ್ವಜನಿಕ ವಾಚನಾಲಯವೊಂದನ್ನು ಏಶಿಯಾದಲ್ಲಿಯ ಹಿಂದುಳಿದ ರಾಷ್ಟ್ರಗಳ ಸಲುವಾಗಿ ತೆರೆಯಬೇಕೆಂದು ತೀರ್ಮಾನಿಸಿತು. ಭಾರತ ಸರಕಾರ ಇಂಥ ವಾಚನಾಲಯ ವನ್ನು ದಿಲ್ಲಿಯಲ್ಲಿ ಸ್ಥಾಪಿಸಬೇಕೆಂದು ಕೇಳಿಕೊಂಡಿತು. ಈ ವಾಚನಾಲಯದ ಉದ್ಘಾಟನೆಯು ೧೯೫೧ ಅಕ್ಟೋಬರ ೨೭ ರಂದು ಪ್ರಧಾನಿ ನೆಹರೂರಿಂದ ಜರುಗಿತು. ಯುನೆಸ್ಕೋ, ಭಾರತ ಸರಕಾರ ಹಾಗೂ ದಿಲ್ಲಿ ಕಾರ್ಪೋರೇಶನ್, ಈ ಮೂರು ಮಹಾಸಂಸ್ಥೆಗಳು ಕೂಡಿಕೊಂಡು ಈ ಗ್ರಂಥಾಲಯವನ್ನು ನಡೆಸಿಕೊಂಡು ಬರುವದಕ್ಕೆ ಟೊಂಕ ಕಟ್ಟಿ ನಿಂತಿವೆ. ಈ ಆದರ್ಶ ಗ್ರಂಥಾಲಯದ ಆಡಳಿತದ ಹಿನ್ನೆಲೆಯಾಗಿ ಈ ಕೆಳಗಿನ ತತ್ವಗಳಿವೆ.

ಅ) ಗ್ರಂಥಾಲಯಕ್ಕೆ ಬಹ್ವಂಶವಾಗಿಯಾಗಲೀ ಅಥವಾ ಸಂಪೂರ್ಣವಾಗಿಯಾಗಲೀ ಧನಸಹಾಯ ಕರರೂಪವಾಗಿ ದೊರೆಯತಕ್ಕದ್ದು.

ಆ) ಗ್ರಂಥಾಲಯದ ಸದಸ್ಯನಾಗಲು ಯಾವದೇ ನಾಗರಿಕನಿಗೆ ಆತಂಕವಿರಕೂಡದು.

ಇ) ತಮತಮಗೆ ಬೇಕಾದ ಪುಸ್ತಕಗಳನ್ನು ಆರಿಸಿ-ಕೊಳ್ಳಲು ಪುಸ್ತಕಗಳನ್ನಿಟ್ಟ ಕಪಾಟುಗಳಿಗೆ ನೇರವಾಗಿ ಹೋಗಲು ಓದುಗರಿಗೆ ಸ್ವಾತಂತ್ರ್ಯವಿರಬೇಕು.

ಈ) ಗ್ರಂಥಾಲಯದೊಳಗಿನ ಪುಸ್ತಕಗಳು ಓದುವದ-ಕ್ಕಾಗಿವೆ, ಅಲಂಕಾರಕ್ಕಲ್ಲ.

ಹಿಂದೀ, ಪಂಜಾಬೀ, ಉರ್ದು ಹಾಗೂ ಇಂಗ್ಲೀಷ ಭಾಷೆಗಳಲ್ಲಿರುವ ಈ ಗ್ರಂಥಾಲಯದಲ್ಲಿಯ ಒಟ್ಟು ಗ್ರಂಥ-ಸಂಗ್ರಹ ಇಂದು ೩ ಲಕ್ಷ ೨೪ ಸಾವಿರಕ್ಕೂ ಮಿಕ್ಕಿದೆ. ೧೯೫೩ ರಿಂದ ಸಂಚಾರಿ ವಾಚನಾಲಯವೊಂದನ್ನು ಇದಕ್ಕೆ ಜೋಡಿಸಲಾಗಿದೆ. ವಾಚನಾಲಯದಲ್ಲಿ ಹೆಣ್ಣುಮಕ್ಕಳಿಗೆ ಹಾಗೂ ಚಿಕ್ಕವರಿಗೆ ಓದಲು ವಿಶೇಷ ವ್ಯವಸ್ಥೆ ಮಾಡಲಾಗಿದೆ. ಕಾಲಕಾಲಕ್ಕೆ ಇಲ್ಲಿ ಭಾಷಣ, ಚಲನಚಿತ್ರ ಕಾರ್ಯಕ್ರಮ, ಮಕ್ಕಳಿಗಾಗಿ ಕಥಾಗೋಷ್ಠಿ ಇವೆಲ್ಲ ಜರುಗುತ್ತವೆ. ೨೧೪ ಜನ ಕೆಲಸಗಾರರಿರುವ ಈ ಗ್ರಂಥಾಲಯದ ವಾರ್ಷಿಕ ವೆಚ್ಚ ೧೨ ಲಕ್ಷ ರೂಪಾಯಿಗೂ ಮಿಕ್ಕುತ್ತದೆ. ಈಗ ಕೆಲವು ವರ್ಷಗಳ ಹಿಂದೆ ಪ್ರಧಾನಿ ನೆಹರೂರು ತಮ್ಮ ಸ್ವಂತ ಪುಸ್ತಕ ಸಂಗ್ರಹದಲ್ಲಿಯ ೪೦೦ ಗ್ರಂಥಗಳನ್ನು ಈ ಗ್ರಂಥಾಲಯಕ್ಕೆ ಕಾಣಿಕೆಯಾಗಿ ಕೊಟ್ಟಿದ್ದರು.

ಇವಲ್ಲದೆ ಮೊದಲನೇ ಯೋಜನೆಯಲ್ಲಿ ೯ ಪ್ರಾಂತೀಯ ಕೇಂದ್ರ ಗ್ರಂಥಾಲಯಗಳನ್ನೂ, ೧೪೮ ಜಿಲ್ಲಾ ಗ್ರಂಥಾಲಯಗಳನ್ನೂ ಸ್ಥಾಪಿಸಲಾಯಿತು.

ಮುಂದಿನ ಯೋಜನೆಗಳಲ್ಲಿ ಜಿಲ್ಹಾ ಗ್ರಂಥಾಲಯಗಳನ್ನೂ, ಕಲಕತ್ತೆಯಲ್ಲಿರುವ ರಾಷ್ಟ್ರೀಯ ಗ್ರಂಥಾಲಯದ ಮಾದರಿಯ ಮೇಲೆ ಮುಂಬೈ ಹಾಗೂ ಮದ್ರಾಸ ಮಹಾನಗರಗಳಲ್ಲಿ ಇನ್ನೆರಡು ರಾಷ್ಟ್ರೀಯ ಗ್ರಂಥಾಲಯಗಳನ್ನೂ ಕೇಂದ್ರ ಗ್ರಂಥಾಲಯಗಳನ್ನೂ, ಗ್ರಾಮೀಣ ಗ್ರಂಥಾಲಯಗಳನ್ನೂ, ಗಾಲಿಯ ಗ್ರಂಥಾಲಯಗಳನ್ನೂ ಹಾಗೂ ಇವಕ್ಕೆಲ್ಲ ಮುಕುಟಪ್ರಾಯವಾಗಿ ರಾಜಧಾನಿಯಾದ ನವದೆಹಲಿಯಲ್ಲಿ ರಾಷ್ಟ್ರೀಯ ಕೇಂದ್ರ ಗ್ರಂಥಾಲಯವನ್ನೂ ಹೀಗೆ ಗ್ರಂಥಾಲಯಗಳ ಜಾಳಿಗೆಯನ್ನೇ ಹಬ್ಬಿಸಲು ಯೋಜಿಸಲಾಗಿದೆ

ಯೋಜನೆಯ ವಲಯದಲ್ಲಿ ಇದೆಲ್ಲ ಸಾಧ್ಯವಾಗಿದ್ದರೆ ಅದರ ವಲಯದ ಹೊರಗಡೆ ಇನ್ನೂ ಅನೇಕಾನೇಕ ರಚನಾತ್ಮಕ ಘಟನೆಗಳು ಜರುಗಿವೆ. ಗ್ರಂಥಾಲಯ ಚಳವಳಿಗೆ ಪ್ರೋಷಕವಾಗುವಂತಹ ಒಂದೆರಡು ಸಂಘ ಸಂಸ್ಥೆಗಳು ವ್ಯೈವೆತ್ತಿ ಮೂಡಿ ಬಂದಿವೆ. ಇವುಗಳ ಬಗ್ಗೆ ಈ ಕೆಳಗೆ ಸ್ವಲ್ಪದರಲ್ಲಿ ಹೇಳಲಾಗಿದೆ.

## ಕುರುಡರ ರಾಷ್ಟ್ರೀಯ ಗ್ರಂಥಾಲಯ
## ( National Library for the Blind )

ದೇಶದಲ್ಲಿನ ಕುರುಡು ಓದುಗರಿಗೆ ಗ್ರಂಥಗಳನ್ನು ಒದಗಿಸುವದಕ್ಕೋಸ್ಕರ ಭಾರತ ಸರಕಾರದವರು ಡೆಹರಾಡೂನಿನಲ್ಲಿ ೧೯೬೩ ರಲ್ಲಿ ಕುರುಡರ ರಾಷ್ಟ್ರೀಯ ಗ್ರಂಥಾಲಯ

ವನ್ನು ಸ್ಥಾಪಿಸಿದರು. ಇಂದಿಗೆ ಈ ಗ್ರಂಥಾಲಯದಲ್ಲಿ ೮೦೧ ಕ್ಕೂ ಮಿಕ್ಕಿ ಬ್ರೇಲ್ ಗ್ರಂಥಗಳಿವೆ. ಒಟ್ಟಿಗೆ ೫೦೦ ಕ್ಕೂ ಮಿಕ್ಕಿ ಕುರುಡರು ಗ್ರಂಥಗಳನ್ನು ಇಲ್ಲಿಂದ ಪಡೆದುಕೊಂಡು ತಮ್ಮ ಜ್ಞಾನದಾಹವನ್ನಾರಿಸಿಕೊಳ್ಳುತ್ತಾರೆ. ಈ ಬ್ರೇಲ್ ಗ್ರಂಥಗಳನ್ನು ದೇಶದಲ್ಲಿನ ಯಾವದೇ ಹಳ್ಳಿ ಪಟ್ಟಣಗಳಲ್ಲಿರುವ ಕುರುಡ ಬಾಂಧವರಿಗೆ ಟಪಾಲು ವೆಚ್ಚವಿಲ್ಲದೆಯೇ ಓದಲು ಒದಗಿಸಿ ಕೊಡಲಾಗುವದು.

## ರಾಷ್ಟ್ರೀಯ ವೈದ್ಯಕೀಯ ಗ್ರಂಥಾಲಯ
## (National Medical Library)

ಈ ಗ್ರಂಥಾಲಯವನ್ನೂ ಇದೀಗ ದಿಲ್ಲಿಯಲ್ಲಿ ಪ್ರಾರಂಭಿಸಲಾಗಿದೆ.

## ಇಂಡಿಯನ್ ನ್ಯಾಶನಲ್ ಸೈಂಟಿಫಿಕ್ ಡಾಕ್ಯುಮೆಂಟೇಶನ್ ಸೆಂಟರ
## ( ಇನ್ಸಡಾಕ್ INSDOC )

೧೯೫೨ ರಲ್ಲಿ ದಿಲ್ಲಿಯಲ್ಲಿ ಸ್ಥಾಪಿತವಾದ ಈ ಸಂಸ್ಥೆ ( Indian National Scientific Documentation Centre ) ವಿಜ್ಞಾನ ಸಂಶೋಧನೆಯಲ್ಲಿ ತೊಡಗಿದ ಜ್ಞಾನ-ಪಿಪಾಸುಗಳಿಗೆಲ್ಲ ಕಾಮಧೇನುವಾಗಿ ಬೆಳೆಯುತ್ತ ಬಂದಿದೆ. 'ಯುನೆಸ್ಕೋ'ದ ನೆರವಿನಿಂದ ಇನ್ಸಡಾಕ್, ವಿಶ್ವವಿದ್ಯಾಲಯ-

ಗಳಿಗೆ ಹಾಗೂ ಸಂಶೋಧನ ಸಂಸ್ಥೆಗಳಿಗೆ ಬೇಕಾಗುವ ಎಲ್ಲ ವೈಜ್ಞಾನಿಕ ನಿಯತಕಾಲಿಕೆಗಳನ್ನು ತರಿಸಿಕೊಂಡು ದೇಶದಲ್ಲಿನ ವೈಜ್ಞಾನಿಕ ಸಂಶೋಧಕರಿಗೆ ಅತ್ಯಲ್ಪ ವೆಚ್ಚದಲ್ಲಿ ಆ ನಿಯತ-ಕಾಲಿಕೆಗಳಲ್ಲಿ ಪ್ರಕಟವಾಗಿರುವ ಹಾಗೂ ಪ್ರಕಟವಾಗುವ ಲೇಖಗಳ ಫೋಟೊ ಪ್ರತಿಗಳನ್ನೂ, ಮೈಕ್ರೊಫಿಲ್ಮುಗಳನ್ನೂ ಒದಗಿಸುತ್ತದೆ. ಇದಲ್ಲದೆ ಅನ್ಯ ಭಾಷೆಯಲ್ಲಿದ್ದ ಲೇಖಗಳ ಭಾಷಾಂತರಗಳನ್ನು ಸಹ ಪೂರೈಸುತ್ತದೆ. ಭಾರತೀಯ ವೈಜ್ಞಾನಿಕರು ಪ್ರಕಟಿಸುತ್ತಿರುವ ಲೇಖನಗಳ ಸಾರಾಂಶಗಳ-ನ್ನೊಳಗೊಂಡ ಮಾಸಿಕವೊಂದನ್ನು (Indian Science Abstracts) ೧೯೬೫ ರಿಂದ ಈ ಸಂಸ್ಥೆ ಪ್ರಕಟಿಸುತ್ತ ಬಂದಿದೆ. ಕಳೆದ ಎರಡು ವರುಷಗಳಿಂದ "Documentation and Reprography" ಈ ವಿಷಯಗಳಲ್ಲಿ ಸ್ನಾತಕೋತ್ತರ ಡಿಪ್ಲೋಮಾ ತರಗತಿಯನ್ನು ದೇಶದಲ್ಲಿನ ವಿಶಿಷ್ಟ ಗ್ರಂಥಾಲಯ ಗಳಲ್ಲ ಕೆಲಸ ಮಾಡುತ್ತಿರುವ ತರಬೇತಿ ಹೊಂದಿದ ಗ್ರಂಥ ಪಾಲರಿಗಾಗಿ ನಡೆಸಿಕೊಂಡು ಬರುತ್ತಿದೆ.

ಈ ಸಂಸ್ಥೆಯ ಚಟುವಟಿಕೆಗಳಿಂದ ವೈಜ್ಞಾನಿಕರಿಗೆ ವೇಳೆಗೆ ಸರಿಯಾಗಿ ವಿಶೇಷ ವೆಚ್ಚವಿಲ್ಲದೆ ಸಹಾಯ ದೊರೆತು ಸಂಶೋಧನ ಕಾರ್ಯ ದೇಶದಲ್ಲೆಲ್ಲ ದ್ರುತಗತಿಯಿಂದ ಸಾಗು ವಂತಾಗಿದೆ. ಇದರ ಶಾಖೆಯೊಂದನ್ನು ಇತ್ತೀಚೆಗೆ ಬೆಂಗಳೂರಿನಲ್ಲಿ ತೆರೆಯಲಾಗಿದೆ ಶೀಘ್ರದಲ್ಲಿಯೇ ಇದರ ಅಂಗವಾಗಿ ರಾಷ್ಟ್ರೀಯ ವೈಜ್ಞಾನಿಕ ಗ್ರಂಥಾಲಯವನ್ನು (National Science Library) ಸ್ಥಾಪಿಸಲಿದ್ದಾರೆ. ಅಚ್ಚ ಕನ್ನಡಿಗರಾದ ಪದ್ಮಶ್ರೀ

ಬಿ. ಎಸ್. ಕೇಶವನ್ನರೇ ಈ ಸಂಸ್ಥೆಯ ಧೀಮಂತ ಡಾಯರೆಕ್ಟರರಾಗಿದ್ದಾರೆ.

## ಇಂಡಿಯನ್ ಅಸೋಸಿಯೇಶನ್ ಆಫ್ ಸ್ಪೆಶಲ್ ಲೈಬ್ರರೀಜ ಎಂಡ ಇನ್‌ಫರ್ಮೇಶನ್ ಸೆಂಟರ

## ( ಇಯಾಸ್ಲಿಕ್ IASLIC )

ಗ್ರಂಥಾಲಯ ಚಳವಳಿಯ ಈ ಸಿಂಹಾವಲೋಕನದಲ್ಲಿ ಈ ಸಂಸ್ಥೆಯನ್ನು ಕಡೆಗಣಿಸುವಂತಿಲ್ಲ. ೧೯೫೫ ರಲ್ಲಿ ಹುಟ್ಟಿದ Indian Association of Special Libraries and Information Centre ಭಾರತದಲ್ಲಿಯ ತಾಂತ್ರಿಕ ಹಾಗೂ ವಿಶಿಷ್ಟ ಗ್ರಂಥಾಲಯಗಳನ್ನು ಒಂದುಗೂಡಿಸಿ ಅವುಗಳಲ್ಲಿ ನವ ಚೈತನ್ಯವನ್ನುಂಟುಮಾಡುವ ಕಾರ್ಯದಲ್ಲಿ ಉದ್ಯುಕ್ತವಾಗಿದೆ. ಇದು ಈಗಾಗಲೇ ಆರು ಸಮ್ಮೇಲನಗಳನ್ನು ಜರುಗಿಸಿದೆ.

## ವಿಶ್ವವಿದ್ಯಾಲಯ ಧನಸಹಾಯ ಆಯೋಗ

## (University Grants Commission)

ಆಯೋಗ ಹುಟ್ಟಿ ಬಂದಾಗಿನಿಂದ ದೇಶದಲ್ಲಿಯ ವಿಶ್ವವಿದ್ಯಾಲಯಗಳಿಗೆ ಧನಲಕ್ಷ್ಮಿಯೇ ಮೂರ್ತಿವೆತ್ತು ಬಂದಂತಾಗಿದೆ. ವಿಶ್ವವಿದ್ಯಾಲಯಗಳ ಜೀವಾಳವೆಂದರೆ

ಗ್ರಂಥಾಲಯಗಳೇ ಎಂಬುದನ್ನು ಮನಗಂಡ ಈ ಆಯೋಗ ಪ್ರತಿಯೊಂದು ವಿಶ್ವವಿದ್ಯಾಲಯದಲ್ಲಿಯ ಗ್ರಂಥಾಲಯದ ಪುನರುಜ್ಜೀವನಕ್ಕಾಗಿ ಹೊನ್ನಿನ ಹೊಳೆಯನ್ನೇ ಹರಿಸಿದೆ ಎಂದರೆ ತಪ್ಪಾಗಲಾರದು. ವಿಶ್ವವಿದ್ಯಾಲಯ ಗ್ರಂಥಾಲಯ-ಗಳ ಹೊಸ ಕಟ್ಟಡ ನಿರ್ಮಾಣಕ್ಕಾಗಿ, ಆ ಕಟ್ಟಡಗಳನ್ನು ಸಜ್ಜುಗೊಳಿಸಲು ಬೇಕಾಗುವ ಹೊಸ ಹೊಸ ಸಲಕರಣೆ ಹಾಗೂ ಉಪಕರಣಗಳ ಖರೀದಿಗಾಗಿ, ಮತ್ತು ವಿಶೇಷ ಗ್ರಂಥಗಳ ಸಂಗ್ರಹಕ್ಕಾಗಿ ಪ್ರತಿವರ್ಷವೂ ಲಕ್ಷಗಟ್ಟಲೆ ರೂಪಾಯಿಗಳನ್ನು ಸಹಾಯರೂಪವಾಗಿ ವಿಶ್ವವಿದ್ಯಾಲಯ ಗಳಿಗೆ ನೀಡುತ್ತಿದೆ. (ವಿಶ್ವವಿದ್ಯಾಲಯ ಆಯೋಗ ಇಲ್ಲಿಯ ವರೆಗೆ ದೇಶದಲ್ಲಿಯ ವಿಶ್ವವಿದ್ಯಾಲಯಗಳಿಗೆ ಗ್ರಂಥಾಲಯ ಭವನಗಳನ್ನು ನಿರ್ಮಿಸಲು ಹಾಗೂ ಅವುಗಳನ್ನು ಅವಶ್ಯವಾದ ಸಲಕರಣೆಗಳಿಂದ ಸಜ್ಜುಗೊಳಿಸಲು ೩.೩೯ ಕೋಟಿ ರೂಪಾಯಿಗಳನ್ನು ಕೊಡಮಾಡಿದೆ. ಇದಲ್ಲದೆ ೨.೪ ಕೋಟಿ ರೂಪಾಯಿಗಳನ್ನು ವಿಶೇಷ ಗ್ರಂಥಗಳನ್ನು ಕೊಂಡುಕೊಳ್ಳಲಿಕ್ಕೆ ಇವೆಲ್ಲ ವಿಶ್ವವಿದ್ಯಾಲಯಗಳಿಗೆ ಕೊಟ್ಟಿದೆ). ಇದಲ್ಲದೆ ಗ್ರಂಥಾಲಯವನ್ನು ಸಂಘಟಿಸುವಲ್ಲಿ, ನಡೆಸಿಕೊಂಡು ಹೋಗುವಲ್ಲಿ ಸೂಕ್ತ ಸಲಹೆಗಳನ್ನು ತಾನು ನೇಮಿಸಿದ ಗ್ರಂಥಾಲಯ ತಜ್ಞರ ಸಲಹಾ ಸಮಿತಿಯ ಮೂಲಕ ಕೊಡುತ್ತದೆ. ಈ ಎಲ್ಲ ಸಹಾಯ ಗ್ರಂಥಾಲಯಗಳಿಗೆ ನವಚೈತನ್ಯವನ್ನು ನೀಡುತ್ತಿದೆ ದಿಲ್ಲಿ, ಆಗ್ರಾ, ಅಲ್ಹಾಬಾದ, ಅಲೀಗಡ, ಪುಣೆ, ನಾಗಪೂರ, ಮೈಸೂರು, ಮರಾಠವಾಡಾ,

ಎಸ್. ಎನ್. ಡಿ. ಟಿ., ಶಿವಾಜಿ, ಉಸ್ಮಾನಿಯ, ವೆಂಕಟೇಶ್ವರ, ಕೇರಳ, ಕಲಕತ್ತಾ, ಸಾಗರ, ರಾಜಸ್ಥಾನ, ಇವೆಲ್ಲ ವಿಶ್ವ-ವಿದ್ಯಾಲಯಗಳು ಹೊಚ್ಚ ಹೊಸದಾದ, ಅತ್ಯಾಧುನಿಕವಾದ, ಪ್ರತ್ಯೇಕವಾದ ಗ್ರಂಥಾಲಯ ಭವನಗಳನ್ನು ಈಗಾಗಲೇ ಆಯೋಗದ ಧನ ಸಹಾಯದಿಂದ ಕಟ್ಟಿಸಿಕೊಂಡಿವೆ. ಇನ್ನುಳಿದ ವಿಶ್ವವಿದ್ಯಾಲಯಗಳಿಗೂ ಈ ನಿಮಿತ್ತ ಆಯೋಗ ಧನ ಸಹಾಯ ಸಲ್ಲಿಸುತ್ತಿದೆ.

ತೃತೀಯ ಪಂಚವಾರ್ಷಿಕ ಯೋಜನೆಯ ವೇಳೆಗೆ ಆಯೋಗ ತನ್ನ ಲಕ್ಷ್ಯವನ್ನು ಕಾಲೇಜುಗಳಲ್ಲಿನ ಗ್ರಂಥಾ-ಲಯಗಳ ಪುನರುಜ್ಜೀವನಕ್ಕೆ ಹೊರಳಿಸಿತು. ಇದಲ್ಲದೆ ಭಾರತ ಸರಕಾರದ ಶಿಕ್ಷಣ ಶಾಖೆ ಹಾಗೂ ಅಮೇರಿಕೆಯ ರಾಯಭಾರಿ ಕಚೇರಿ ಇವುಗಳ ಸಹಕಾರದಿಂದ ಹಲವು ವರ್ಷ ಗಳ ಹಿಂದೆ ಅಮೇರಿಕೆಯಿಂದ ಕೊಂಡ ಗೋದಿ ಸಾಲದಿಂದ (Wheat Loan) ಆಯೋಗ ವಿಶ್ವವಿದ್ಯಾಲಯದ ಗ್ರಂಥಾ-ಲಯಗಳಿಗೆ ಅವಶ್ಯವಾದ, ಉಪಯುಕ್ತವಾದ ಹಾಗೂ ಬೆಲೆಯುಳ್ಳ ಅಮೇರಿಕೆಯ ಗ್ರಂಥಗಳನ್ನು ಕೊಳ್ಳ-ವದಕ್ಕೋಸ್ಕರ ಸಹಸ್ರಾರು ಡಾಲರುಗಳ ದಾನ ಮಾಡಿದೆ. ಮತ್ತು ವಿಶ್ವವಿದ್ಯಾಲಯದ ಗ್ರಂಥಾ-ಲಯಗಳು ಒಳ್ಳೇ ರೀತಿಯಿಂದ ಬೆಳೆದುಕೊಂಡು ಬರಬೇಕು ಹಾಗೂ ವಿಶೇಷ ಕಾರ್ಯಕ್ಷಮತೆಯಿಂದ ನಡೆ-ಸಲ್ಪಡಬೇಕೆಂಬ ಉದ್ದೇಶದಿಂದ ದೇಶದಲ್ಲಿನ ಕೆಲವೊಂದು ವಿಶ್ವವಿದ್ಯಾಲಯದ ಗ್ರಂಥಪಾಲರನ್ನು ಆರಿಸಿ ವಿಶೇಷ ತರ-

ಬೇತಿಗಾಗಿ ಅಮೇರಿಕೆಗೆ ಅಭ್ಯಾಸ ಪ್ರವಾಸಕ್ಕಾಗಿ ಕಳಿಸುತ್ತಲಿದೆ. ಇಲ್ಲಿಯುವರೆಗೆ ೩೫ ಜನರು ಇಂಥ ಪ್ರವಾಸಗಳನ್ನು ಕೈಕೊಂಡು ಮರಳಿ ಬಂದಿರುವರು.

ಇದಲ್ಲದೆ ಕೋಲಂಬೋ ಯೋಜನೆಯಲ್ಲಿ ಕೂಡ ವಿಶ್ವವಿದ್ಯಾಲಯುಗಳಿಗೆ ಆಸ್ಟ್ರೇಲಿಯಾ ಮುಂತಾದ ದೇಶ-ಗಳಿಂದ ಗ್ರಂಥಗಳು ಸಲ್ಲುವಂತೆ ನೋಡಿಕೊಳ್ಳಲಾಗಿದೆ.

## ಸಂಪರ್ಕ ಗ್ರಂಥಾಲಯುಗಳು
## (Contact Libraries)

ಭಾರತದಲ್ಲಿನ ಗ್ರಂಥಾಲಯ ಚಳುವಳಿಗೆ ಅಮೇರಿಕೆಯ ಸುದ್ದಿ ಸಂಸ್ಥೆಯ ಗ್ರಂಥಾಲಯುಗಳು (ಇವು ೧೦ ಇವೆ), ಬ್ರಿಟನ್ನಿನ ಸುದ್ದಿ ಸಂಸ್ಥೆಯ ಗ್ರಂಥಾಲಯುಗಳು, ಎಲ್ಲಕ್ಕೂ ಮುಖ್ಯವಾಗಿ ಬ್ರಿಟಿಷ್ ಕೌನ್ಸಿಲಿನ ಗ್ರಂಥಾಲಯುಗಳು ( ಇವುಗಳ ಸಂಖ್ಯೆ ೪ ), ಪುಷ್ಟಿಕೊಟ್ಟಿವೆಯೆಂಬ ಮಾತು ಇಲ್ಲಿ ಗಮನಾರ್ಹವಾಗಿದೆ. ವಿಶೇಷವಾಗಿ ಅಮೇರಿಕೆಯ ಸಾಂಸ್ಕೃತಿಕ ಕೇಂದ್ರಗಳೂ ಬ್ರಿಟಿಷ್ ಕೌನ್ಸಿಲಿನವರು ಈ ದಿಶೆಯಲ್ಲಿ ಮಾಡುತ್ತಿರುವ ಕಾರ್ಯ ಪ್ರಶಂಸನೀಯುವಾಗಿದೆ. ಈ ಎರಡೂ ಸಂಸ್ಥೆಗಳವರು ಕಾಲಕಾಲಕ್ಕೆ ಗ್ರಂಥಾಲಯ ಶಾಸ್ತ್ರಕ್ಕೆ ಸಂಬಂಧಿಸಿದ ವಿಷಯುಗಳ ಮೇಲೆ ವಿಚಾರ ಸಂಕಿರಣಗಳನ್ನು ಏರ್ಪಡಿಸುವರಲ್ಲದೆ ಚಿಕ್ಕ ಮಕ್ಕಳಿಗೆ, ಶಾಲೆ ಕಾಲೇಜುಗಳಿಗೆ,ವಿಶ್ವವಿದ್ಯಾಲಯುಗಳಿಗೆ ಉಪಯೋಗ ಬೀಳುವ

ಉತ್ತಮೋತ್ತಮ ಗ್ರಂಥಗಳ ಪ್ರದರ್ಶನಗಳನ್ನು ದೇಶದ ಮಹತ್ವದ ಪಟ್ಟಣಗಳಲ್ಲಿ ಏರ್ಪಡಿಸುತ್ತಾರೆ.

## ಮಾಧ್ಯಮಿಕ ಶಾಲೆಗಳ ವಾಚನಾಲಯುಗಳು

ಸಾರ್ವಜನಿಕ ವಾಚನಾಲಯುಗಳ, ಕಾಲೇಜು ಹಾಗೂ ವಿಶ್ವವಿದ್ಯಾಲಯು ವಾಚನಾಲಯುಗಳ ಬಗ್ಗೆ ಆಸ್ಥೆ ವ್ಯಕ್ತ-ಪಡಿಸಿದ ಭಾರತ ಸರಕಾರ ಮಾಧ್ಯಮಿಕ ಶಾಲೆಗಳ ಗ್ರಂಥಾ-ಲಯುಗಳ ಬಗ್ಗೆ ಅನಾಸ್ಥೆ ವಹಿಸಿದೆ ಎಂದೆನ್ನುವಂತಿಲ್ಲ. ಮೊದಲನೇ ಪಂಚವಾರ್ಷಿಕ ಯೋಜನೆಯಲ್ಲಿಯೇ ಈ ಗ್ರಂಥಾಲಯುಗಳಿಗೆ ಕೂಡ ಸಹಾಯು ಸಲ್ಲುವಂತೆ ಸರಕಾರ ನೋಡಿಕೊಂಡಿದೆ. ದೇಶದೊಳಗಿನ ಕೆಲವೊಂದು ಹೆಸರಾಂತ ಶಾಲೆಗಳನ್ನಾಯ್ದುಕೊಂಡು ಅವುಗಳಿಗೆ ತಮ್ಮ ಗ್ರಂಥಾಲಯು ಗಳನ್ನು ಸುಧಾರಿಸಿಕೊಳ್ಳಲಿಕ್ಕೆ, ಹಾಗೂ ಗ್ರಂಥ ಸಂಗ್ರಹ ವನ್ನು ವೃದ್ಧಿಪಡಿಸಿಕೊಳ್ಳಲಿಕ್ಕೆ ಸಹಾಯು ಧನ ನೀಡಿದೆ.

ಇದಲ್ಲದೆ ಅಲ್ಲಾಬಾದ ವಿಶ್ವವಿದ್ಯಾಲಯುದ ಶಿಕ್ಷಣ ವಿಭಾಗದವರ ಮುಖಾಂತರ ಭಾರತ ಸರಕಾರ, ಉತ್ತರ ಪ್ರದೇಶದಲ್ಲಿರುವ ಎಲ್ಲ ಮಾಧ್ಯಮಿಕ ಶಾಲೆಗಳಲ್ಲಿನ ಗ್ರಂಥಾ-ಲಯುಗಳ ಸಮೀಕ್ಷಣೆ ಮಾಡಿಸಿ ಒಂದು ವರದಿಯನ್ನು ಹೊರಡಿಸಿದೆ. ಶೀಘ್ರದಲ್ಲಿಯೇ ಸರಕಾರ ದೇಶದಲ್ಲಿನ ಎಲ್ಲ ಮಾಧ್ಯಮಿಕ ಶಾಲೆಗಳ ಗ್ರಂಥಾಲಯುಗಳ ಪುನರುದ್ಧಾರ ಕಾರ್ಯ ಕೈಕೊಳ್ಳಲಿ ಎಂದು ಹಾರೈಸೋಣ. [ ಭಾರತದಲ್ಲಿ

೧೯೬೩ ರಲ್ಲಿ ೩,೬೭,೬೭೬ ಪ್ರಾಥಮಿಕ ಶಾಲೆಗಳೂ, ೭೬,೮೧೬ ಹೈಸ್ಕೂಲುಗಳೂ ಹಾಗೂ ೨೫೬೮ ಕಾಲೇಜುಗಳೂ ಇದ್ದವು.]

## ಗ್ರಂಥಾಲಯ ಶಾಸ್ತ್ರದಲ್ಲಿ ಶಿಕ್ಷಣ

ಗ್ರಂಥಾಲಯಗಳನ್ನು ಯಶಸ್ವಿಯಾಗಿ ಸಂಘಟಿಸುವದು ಹಾಗೂ ಅವುಗಳನ್ನು ವಿಶೇಷ ಕಾರ್ಯಕ್ಷಮತೆಯಿಂದ, ಸಮರ್ಥ ಮತ್ತು ಅರ್ಥಪೂರ್ಣವಾದ ರೀತಿಯಲ್ಲಿ ತೂಗಿಸಿ ಕೊಂಡು ಹೋಗುವದು, ಇದೆಲ್ಲ ಈಗ ಒಂದು ದೊಡ್ಡ ಶಾಸ್ತ್ರವಾಗಿ ಬೆಳೆದು ಬಂದಿದೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ, ವಿಶೇಷತಃ ಅಮೇರಿಕೆಯಲ್ಲಿ, ಈ ಶಾಸ್ತ್ರದಲ್ಲಿ ಪಿಎಚ್. ಡಿ. ಯಂಥ ಉಚ್ಚಪದವಿಯವರೆಗೆ ಶಿಕ್ಷಣ ಕೊಡಲಾಗುತ್ತಿದೆ.

ಈ ಮೊದಲೇ ಹೇಳಿದಂತೆ ಈ ಶಾಸ್ತ್ರದಲ್ಲಿ ಶಿಕ್ಷಣ ಕೊಡಲು ಭಾರತದಲ್ಲಿ ಪ್ರಾರಂಭವಾದುದು ಬಡೋದೆಯಲ್ಲಿ (೧೯೧೧). ಬಡೋದೆಯ ಉಜ್ವಲ ದಾರಿಯನ್ನು ದ್ವಿತೀಯವಾಗಿ ಅನುಸರಿಸಿದವರು ಪಂಜಾಬ ವಿಶ್ವವಿದ್ಯಾಲಯದವರು (೧೯೧೫); ಮೂರನೆಯವರಾಗಿ ಮದ್ರಾಸ ವಿಶ್ವವಿದ್ಯಾಲಯದವರು (೧೯೩೧). ಕ್ರಮೇಣ ದೇಶದಲ್ಲಿನ ಇನ್ನುಳಿದ ಕೆಲವು ವಿಶ್ವವಿದ್ಯಾಲಯಗಳು ಇಂಥ ಶಿಕ್ಷಣ ಕೇಂದ್ರಗಳನ್ನು ತೆರೆದಿವೆ. ಬನಾರಸ (೧೯೪೧), ಮುಂಬೈ (೧೯೪೪), ಕಲಕತ್ತಾ, ಬಡೋದಾ, ನಾಗಪೂರ, ಅಲೀಗಡ, ಪುಣೆ, ವಿಕ್ರಮ ಈ ಎಲ್ಲ ವಿಶ್ವವಿದ್ಯಾಲಯಗಳಲ್ಲಿ

ಇಂದು ಸ್ನಾತಕೋತ್ತರ ವರ್ಗಗಳನ್ನು ನಡೆಸಲಾಗುತ್ತಿದೆ. ಮರಾಠವಾಡಾ ವಿಶ್ವವಿದ್ಯಾಲಯವೂ ಇಂಥ ವರ್ಗಗಳನ್ನು ತ್ವರಿತವಾಗಿ ತೆರೆಯಲಿದೆ. ಕರ್ನಾಟಕ (೧೯೬೨), ಎಸ್. ಎನ್. ಡಿ. ಟಿ., ಶಿವಾಜಿ (೧೯೬೫), ಮೈಸೂರು (೧೯೬೫), ಕೇರಳ, ಆಂಧ್ರ, ರಾಜಸ್ತಾನ ಇವುಗಳಲ್ಲದೇ ದಿಲ್ಲಿಯಲ್ಲಿರುವ ಇನ್ಸಡಾಕ್ (INSDOC) ಹಾಗೂ ಬೆಂಗಳೂರಿನಲ್ಲಿರುವ ಡಿ. ಆರ್.-ಟಿ. ಸಿ. (D. R. T. C.) ಅಂದರೆ ಡಾಕ್ಯುಮೆಂಟೇಶನ್ ರಿಸರ್ಚ್ ಟ್ರೇನಿಂಗ್ ಸೆಂಟರ ಎಂದು ಈ ಎರಡೂ ಸಂಸ್ಥೆಗಳು ಗ್ರಂಥಾಲಯ ಶಾಸ್ತ್ರದಲ್ಲಿ ಉಚ್ಚತಮ ತರಬೇತಿ ಕೊಡುವ ಕಾರ್ಯಕ್ರಮಗಳನ್ನು ನಡೆಯಿಸಿಕೊಂಡು ಬರುತ್ತಿವೆ.

ವರುಷ ವರುಷಕ್ಕೂ ಶಾಲೆ ಕಾಲೇಜುಗಳ, ವಿಶ್ವ-ವಿದ್ಯಾಲಯಗಳ ಸಂಖ್ಯೆ ಬೆಳೆಯುತ್ತಲಿದೆ. ಈ ಸಂಸ್ಥೆಗಳ-ಲ್ಲಿಯ ಗ್ರಂಥಾಲಯಗಳನ್ನು ನಡೆಸಿಕೊಂಡು ಹೋಗಲು ಯೋಗ್ಯರಾದ, ಗ್ರಂಥಾಲಯ ಶಾಸ್ತ್ರದಲ್ಲಿ ತರಬೇತಿ ಹೊಂದಿದ ತರುಣರು ತಂಡ ತಂಡವಾಗಿ ಬೇಕಾಗಿದ್ದಾರೆ. ಅದಕ್ಕಾಗಿ ಮೇಲೆ ಹೇಳಿದಂಥ ತರಬೇತಿ ಕೇಂದ್ರಗಳು ಇನ್ನೂ ಅಧಿಕ ಸಂಖ್ಯೆಯಲ್ಲಿ ಬೆಳೆದು ಬರಬೇಕು. ಇಂಥ ಶಿಕ್ಷಣ ವರ್ಗಗಳನ್ನು ಇನ್ನುಳಿದ ವಿಶ್ವವಿದ್ಯಾಲಯಗಳು ಶೀಘ್ರದಲ್ಲಿಯೇ ಪ್ರಾರಂಭಿಸುವಂತೆ ವಿಶ್ವವಿದ್ಯಾಲಯ ಆಯೋಗದವರು ಪ್ರಚೋದಿಸುವರೆಂದು ಆಶಿಸೋಣ.

## ಗ್ರಂಥಾಲಯ ಶಾಸ್ತ್ರ ವಿದ್ಯಾಲಯ

ಇನ್ನು ಪಂಚವಾರ್ಷಿಕ ಯೋಜನೆಗಳನ್ವಯ ಭಾರತದಲ್ಲಿ ಅನತಿ ದೂರದಲ್ಲಿಯೇ ಗ್ರಂಥಾಲಯಗಳ ಜಾಳಿಗೆ ಹಬ್ಬಲಿದೆ. ಈ ನೂರಾರು ಗ್ರಂಥಾಲಯಗಳಲ್ಲಿ ಕೆಲಸ ಮಾಡಲು ತರಬೇತಿ ಹೊಂದಿದ ಸಹಸ್ರಾರು ತಗಣರು ಬೇಕಾಗುತ್ತಾರೆ. ಇಂಥ ಒಂದು ಗ್ರಂಥಪಾಲರ ಪಡೆಯನ್ನು ತಯಾರಿಸುವ ಉದ್ದೇಶದಿಂದ ಭಾರತ ಸರಕಾರ ದಿಲ್ಲಿಯಲ್ಲಿ ಗ್ರಂಥಾಲಯ ಶಾಸ್ತ್ರದಲ್ಲಿ ಪ್ರತ್ಯೇಕ ವಿದ್ಯಾಲಯವನ್ನು ತೆರೆದಿದ್ದಾರೆ.

ಸಮಾಜ ಶಿಕ್ಷಣದ ಯೋಜನೆಯ ಅಂಗವಾಗಿ ಸರಕಾರ ದಿಲ್ಲಿ ವಿಶ್ವವಿದ್ಯಾಲಯಕ್ಕೆ ಈ ವಿದ್ಯಾಲಯವನ್ನು ಸ್ಥಾಪಿಸಲು ರೂ. ೧,೦೪,೫೭೮ ಕೊಟ್ಟದೆ. ೧೯೫೯ ರ ಮಾರ್ಚ ೨ನೇ ದಿನಾಂಕ ಮೂರ್ತ ಸ್ವರೂಪಗೊಂಡ ಈ ವಿದ್ಯಾಲಯ ದಿಲ್ಲಿ ವಿಶ್ವವಿದ್ಯಾಲಯದ ಗ್ರಂಥಾಲಯ ಶಾಸ್ತ್ರದ ವಿಭಾಗದಲ್ಲಿ ಲೀನವಾಗಿದೆ. ಈ ವಿದ್ಯಾಲಯದ ಮುಖ್ಯ ಕಾರ್ಯಗಳೆಂದರೆ:

೧) ಪಂಚವಾರ್ಷಿಕ ಯೋಜನೆಗಳನ್ವಯ ದೇಶದಾದ್ಯಂತ ಸ್ಥಾಪಿಸಲ್ಪಡುವ ರಾಜ್ಯದ ಕೇಂದ್ರ ಗ್ರಂಥಾಲಯಗಳು, ಜಿಲ್ಲಾ ಕೇಂದ್ರ ಗ್ರಂಥಾಲಯಗಳು, ಇವುಗಳನ್ನು ಸಮರ್ಥ ರೀತಿಯಲ್ಲಿ ನಡೆಸಿಕೊಂಡು ಹೋಗಲು ಯೋಗ್ಯತಾವಂತರನ್ನು ತರಬೇತಿಗೊಳಿಸುವ ವರ್ಗಗಳನ್ನು ತೆರೆಯುವದು.

೨) ಗ್ರಂಥಾಲಯ ಶಾಸ್ತ್ರದಲ್ಲಿ ರಿಫ್ರೆಶರ ವರ್ಗಗಳನ್ನು, ಮತ್ತು ಮಕ್ಕಳ ಹಾಗೂ ಶಾಲಾ ಗ್ರಂಥಾಲಯಗಳ ಸಲುವಾಗಿ ಗ್ರಂಥಪಾಲರ ತರಬೇತಿ ವರ್ಗಗಳನ್ನು ತೆರೆಯುವದು; ಇದಲ್ಲದೆ ಫಿಲ್ಮ್, ಮೈಕ್ರೊಫಿಲ್ಮ್, ರೆಕಾರ್ಡು, ಮುಂತಾದವುಗಳನ್ನು ಉಪಯೋಗಿಸುವ ಬಗ್ಗೆ ಶಿಕ್ಷಣ ಕೊಡುವದು ಇತ್ಯಾದಿ.

೩) ಗ್ರಂಥಾಲಯ ಶಾಸ್ತ್ರದಲ್ಲಿ ಸಂಶೋಧನೆ ನಡೆಸುವದು.

೪) ಗ್ರಂಥಾಲಯ ತರಬೇತಿ ವರ್ಗಗಳಿಗೋಸ್ಕರ ಪಠ್ಯ ಪುಸ್ತಕಗಳನ್ನು ತಯಾರಿಸುವದು.

ದಿಲ್ಲಿ ವಿಶ್ವವಿದ್ಯಾಲಯ ಗ್ರಂಥಾಲಯದ ನವೀನ, ಭವ್ಯ, ಅತ್ಯಾಧುನಿಕ ಸ್ವತಂತ್ರ ಭವನದಲ್ಲಿ ಈ ವಿದ್ಯಾಲಯ ತನ್ನ ಕಾರ್ಯವನ್ನು ಪ್ರಾರಂಭಿಸಿದೆ.

## ಗ್ರಂಥಾಲಯ ಕಾಯದೆ

ಭಾರತ ಸರಕಾರದವರು ಪಂಚವಾರ್ಷಿಕ ಯೋಜನೆಗಳಲ್ಲಿ ಗ್ರಂಥಾಲಯಗಳ ಬೆಳವಣಿಗೆಗಾಗಿ ಸಾಕಷ್ಟು ಲಕ್ಷ್ಯ ಕೊಟ್ಟಿದ್ದಾರಾದರೂ ಗ್ರಂಥಾಲಯ ಕಾಯದೆಯೊಂದಿಲ್ಲದೆ ಈ ಚಳವಳಿ ಸಾಕಷ್ಟು ಬಲಿಷ್ಠವಾಗಲಾರದೆಂಬುದು ಮಾತ್ರ ಕಟು ಸತ್ಯವಾದುದು. ಸಮೃದ್ಧವಾದ, ಸುಶಿಕ್ಷಿತವಾದ

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕೂಡ ಗ್ರಂಥಾಲಯ ಚಳವಳಿ ಸರಕಾರದ ಕಾಯದೆಯ ಬೆಂಬಲವಿಲ್ಲದಿರುವವರೆಗೆ ಎಡವುತ್ತ, ಮುಗ್ಗುತ್ತಲೇ ಇತ್ತು. ೧೮೫೦ ರಲ್ಲಿ ಗ್ರಂಥಾಲಯ ಕಾಯದೆಯನ್ನು ಪಾಸುಮಾಡಿಕೊಂಡು ಇಂಗ್ಲಂಡು ಇಡೀ ವಿಶ್ವದಲ್ಲಿಯೇ ಈ ದಿಶೆಯಲ್ಲಿ ಮೊದಲ ಹೆಜ್ಜೆ ಇಟ್ಟಿತು. ಏಶಿಯಾ ಖಂಡದಲ್ಲಿ ಗ್ರಂಥಾಲಯ ಕಾಯದೆಯನ್ನು ಪ್ರಥಮವಾಗಿ ಪಾಸು ಮಾಡಿಕೊಂಡ ದೇಶವೆಂದರೆ ಜಪಾನು. ೧೮೯೯ ರಲ್ಲಿಯೇ ಈ ಚಿಕ್ಕ ರಾಷ್ಟ್ರ ಗ್ರಂಥಾಲಯ ಕಾಯದೆಯೊಂದನ್ನು ಮಾಡಿಕೊಂಡು ದೇಶದಲ್ಲೆಲ್ಲ ಗ್ರಂಥಾಲಯಗಳ ಜಾಳಿಗೆ ಹಬ್ಬಿಸಿ ಬಿಟ್ಟಿತು.

ನಿರಕ್ಷರಿಗಳ ಸಂಖ್ಯೆ ಅಧಿಕವಾಗಿರುವ ನಮ್ಮ ದೇಶದಲ್ಲಿಯಂತೂ ಸರಕಾರದ ಸಂಪೂರ್ಣ ಬೆಂಬಲವಿಲ್ಲದೆ ಈ ಚಳವಳಿ ಪ್ರಭಾವಕಾರಿಯಾಗಿ ಮುನ್ನುಗ್ಗಲಾರದು.

ಗ್ರಂಥಾಲಯ ಕಾಯದೆಯನ್ನು ಜಾರಿಗೆ ತರುವಲ್ಲಿ ಹಿಂದೆ ಕೆಲವೊಂದು ಪ್ರಯತ್ನಗಳಾಗಿವೆಯೆಂದು ಈ ಮೊದಲೇ ಹೇಳಿದೆ. ಇಂಥ ಮೊಟ್ಟ ಮೊದಲನೆಯ ಪ್ರಯತ್ನ ನಡೆದದ್ದು ೧೯೩೦ ರಲ್ಲಿ. ಆ ವರುಷ ಬನಾರಸದಲ್ಲಿ ಪ್ರಥಮವಾಗಿ ಅಖಿಲ ಏಶಿಯಾ ಶೈಕ್ಷಣಿಕ ಪರಿಷತ್ತೊಂದು ಸೇರಿತ್ತು. ಈ ಪರಿಷತ್ತಿನ ಗ್ರಂಥಾಲಯ ಸೇವೆಯ ಅಂಗದ ಮೂಲಕ ಡಾ. ರಂಗನಾಥನ್‌ರು ಪರಿಷತ್ತಿನೆದುರು ಒಂದು ಮಾದರಿ ಗ್ರಂಥಾಲಯ ಕಾಯದೆಯನ್ನು ಸಾದರ ಪಡಿಸಿದರು.

ಕಾಲಾನಂತರ ಬಂಗಾಲದಲ್ಲಿ ಶ್ರೀ ಮುನೀಂದ್ರದೇವ ರಾಯ ಮಹಾಸಾಯಿಯವರು ಈ ಕಾಯದೆಯನ್ನೇ ಅಳವಡಿಸಿಕೊಂಡು ಬಂಗಾಲದ ಲೇಜಿಸ್ಲೇಟಿವ್ ಅಸೆಂಬ್ಲಿಯೆದುರು ತಂದರು.

ಇದರಂತೆ ಮದ್ರಾಸದಲ್ಲಿ ಕೂಡ ಇದೇ ಮಾದರಿಯ ಮೇಲೆ ತಯಾರಿಸಲ್ಪಟ್ಟ ಕಾಯದೆಯ ಕರಡೊಂದು ಮೊಟ್ಟ ಮೊದಲು ೧೯೩೩ ರಲ್ಲಿ, ತದನಂತರ ೧೯೩೭ ರಲ್ಲಿ ಪ್ರಾಂತದ ಲೆಜಿಸ್ಲೇಟಿವ್ ಅಸೆಂಬ್ಲಿಯೆದುರು ಅಯಶಸ್ವಿಯಾಗಿ ಇಡಲ್ಪಟ್ಟಿತು ಮುಂಬೈ ಪ್ರಾಂತದಲ್ಲಿ ಸರಕಾರಿ ಆಜ್ಞೆಯೊಂದರನ್ವಯ ೧೯೪೭ ರಲ್ಲಿ ರಾಜ್ಯದಲ್ಲಿ ಒಂದು ರಾಜ್ಯ ಕೇಂದ್ರ ಗ್ರಂಥಾಲಯ ಹಾಗೂ ೩ ಪ್ರಾದೇಶಿಕ ಕೇಂದ್ರ ಗ್ರಂಥಾಲಯಗಳು ತೆರೆಯಲ್ಪಟ್ಟವು. ಜಿಲ್ಲೆ, ತಾಲೂಕು, ಪಟ್ಟಣ, ಹಳ್ಳಿಯ ಗ್ರಂಥಾಲಯಗಳ ಯೋಜನೆಯನ್ನು ಈ ಆಜ್ಞೆಯನ್ವಯ ಮಾಡಲಾಗಿತ್ತು.

ಗ್ರಂಥಾಲಯ ಕಾಯದೆಯನ್ನು ಮೊದಲ ಬಾರಿಗೆ ಜಾರಿಗೆ ತಂದ ಶ್ರೇಯಸ್ಸು ಮದ್ರಾಸ ರಾಜ್ಯಕ್ಕೆ ಸಲ್ಲುತ್ತದೆ. (೧೯೪೮). (ಆನುವಂಶಿಕವಾಗಿ ಆಂಧ್ರಕ್ಕೂ ಈ ಶ್ರೇಯಸ್ಸು ಸಲ್ಲಬೇಕು). ಆಂಧ್ರರಾಜ್ಯದಲ್ಲಿ ಗ್ರಂಥಾಲಯ ಕಾಯದೆ ಕಾರ್ಯರೂಪದಲ್ಲಿದೆ. ನವ ಮೈಸೂರಿನಲ್ಲಿ ಗ್ರಂಥಾಲಯ ಕಾಯದೆ ಇದೀಗ ಕಾರ್ಯಗತವಾಗುತ್ತಲಿದೆ. ಇನ್ನುಳಿದ ರಾಜ್ಯಗಳಲ್ಲೂ ಗ್ರಂಥಾಲಯ ಕಾಯದೆಯ ಬಗ್ಗೆ ಚಳವಳಿ ನಡೆದೇ ಇದೆ.

೧೯೫೭ ರಲ್ಲಿ ಭಾರತ ಸರಕಾರದವರು ದೇಶದಲ್ಲಿಯ

ಗ್ರಂಥಾಲಯ ಸೌಕರ್ಯಗಳನ್ನು ಸುಧಾರಿಸುವ ಹಾಗೂ ಹೆಚ್ಚಿಸುವ ಉದ್ದೇಶದಿಂದ ಗ್ರಂಥಾಲಯ ಸಲಹಾ ಸಮಿತಿ ಯೊಂದನ್ನು ನೇಮಿಸಿದರು. ಬಿಹಾರ ರಾಜ್ಯದ ಶಿಕ್ಷಣ ಶಾಖೆಯ ಆಗಿನ ಡೈರೆಕ್ಟರ ಶ್ರೀ. ಬಿ. ಕೆ. ಸಿಂಹ, ಇವರು ಅಧ್ಯಕ್ಷರಾಗಿದ್ದ ಈ ಸಮಿತಿಯು ಪರಿಶೀಲಿಸಿದ ಅನೇಕ ಸಮಸ್ಯೆಗಳಲ್ಲಿ ಕೆಳಗಿನವುಗಳು ಮುಖ್ಯವಾದವುಗಳಾಗಿವೆ.

೧. ಜನತೆ ಎಂಥ ಬಗೆಯ ಸಾಹಿತ್ಯವನ್ನು ಓದಲು ಬಯಸುತ್ತಿದೆ?

೨. ಈ ಬಯಕೆಗಳು ಸದ್ಯ ಹೇಗೆ ಪೂರೈಸಲ್ಪಡುತ್ತಿವೆ?

೩. ಜನಾಂಗದ ಬೇರೆ ಬೇರೆ ವರ್ಗಗಳ ವಾಚನಾಭಿರುಚಿಗಳೇನು?

೪. ಈ ವಾಚನಾಭಿರುಚಿಗಳ ಎಲ್ಲ ಮಟ್ಟಗಳಿಗೆ ಅವಶ್ಯವಾದ ಸಾಹಿತ್ಯವನ್ನು ಯಾವ ಯಾವ ಸಂಘ ಸಂಸ್ಥೆಗಳು ಒದಗಿಸುತ್ತಿವೆ?

೫. ಈ ಸಂಘ ಸಂಸ್ಥೆಗಳಿಗೆ ಯಾವ ತೆರನಾದ ಸಹಾಯವನ್ನು ನೀಡಲು ಸಾಧ್ಯ?

೬. ದೇಶದಲ್ಲಿನ ಗ್ರಂಥಾಲಯಗಳ ಸದ್ಯದ ಪರಿಸ್ಥಿತಿ ಏನು?

೭. ಸಮಾಜ ಶಿಕ್ಷಣ ಕೇಂದ್ರಗಳೂ, ಗ್ರಂಥಾಲಯ ಗಳೂ ಯಾವ ರೀತಿಯಲ್ಲಿ ಪರಸ್ಪರವಾಗಿ ಸಹಕರಿಸಿ ಕಾರ್ಯ ಗೈಯಬಹುದು. ?

೮. ಗ್ರಂಥಪಾಲರ ತರಬೇತಿ.

೯. ಭವಿಷ್ಯತ್ತಿನ ಗ್ರಂಥಾಲಯ ವ್ಯವಸ್ಥೆಗೆ ಅವಶ್ಯ-ವಾದ ಆಸರೆಯನ್ನೀಯಲಿಕ್ಕೆ ಆಡಳಿತ ಹಾಗೂ ಹಣಕಾಸು ಇವುಗಳಿಗೆ ಸಂಬಂಧಪಟ್ಟ ಕ್ರಮಗಳು ಇತ್ಯಾದಿ.

ಈ ಸಮಿತಿ ದೇಶವನ್ನೆಲ್ಲ ಸುತ್ತಾಡಿ, ಅನೇಕಾನೇಕ ಗ್ರಂಥಾಲಯಗಳಿಗೆ ಭೆಟ್ಟಿ ಇತ್ತು, ಅಲ್ಲಲ್ಲಿಯ ಶಿಕ್ಷಣ ತಜ್ಞರನ್ನೂ, ಉಚ್ಚ ಅಧಿಕಾರಿಗಳನ್ನೂ ಗ್ರಂಥಪಾಲರನ್ನೂ ಗ್ರಂಥಾಲಯ ಚಳುವಳಿಯಲ್ಲಿ ಆಸ್ಥೆಯುಳ್ಳವರನ್ನೂ ಸಂದ-ರ್ಶಿಸಿ ವರದಿಯೊಂದನ್ನು ಸಿದ್ಧಪಡಿಸಿ ನವ್ಹೆಂಬರ ೧೯೫೮ ರಲ್ಲಿ ಸರಕಾರಕ್ಕೆ ಸಾದರಪಡಿಸಿತು. ಈ ವರದಿಯ ಜೊತೆಗೆ ಸಮಿ-ತಿಯು ಮಾದರಿ ಗ್ರಂಥಾಲಯ ಕರಡೊಂದನ್ನು ಸರಕಾರಕ್ಕೆ ಕೊಟ್ಟಿದೆ. ಈ ಕರಡನ್ನು ಭಾರತ ಸರಕಾರ ರಾಜ್ಯ ಸರಕಾರ ಗಳಿಗೆ ಕಳಿಸಿ, ಅದರ ಆಧಾರದ ಮೇಲೆ ಶೀಘ್ರದಲ್ಲಿಯೇ ಗ್ರಂಥಾಲಯ ಕಾಯದೆಯನ್ನು ಜಾರಿಗೆ ತರಬೇಕೆಂದು ಆದೇಶ ವನ್ನಿತ್ತಿದೆ.

೧೯೫೯ನೇ ಜೂನ ತಿಂಗಳ ಮೊದಲನೆಯ ವಾರದಲ್ಲಿ ಸಮಿತಿಯು ಮಹತ್ವಪೂರ್ಣವಾದ ವರದಿ ಪ್ರಸಿದ್ಧಿಸಲ್ಪಟ್ಟಿತು.

ಸಮಿತಿ, ವರದಿಯಲ್ಲಿ ಸಾಮೂಹಿಕ ನಿರಕ್ಷರತೆಯುಳ್ಳ ನಮ್ಮ ದೇಶಕ್ಕೆ ಈ ದೋಷವನ್ನು ತೊಡೆದು ಹಾಕಲು ಶಾಲೆಗಳು ಎಷ್ಟು ಅವಶ್ಯವೋ, ಗ್ರಂಥಾಲಯಗಳೂ ಅಷ್ಟೇ ಅವಶ್ಯವೆಂದೂ, ಎಲ್ಲರಿಗೂ ಶೀಘ್ರದಲ್ಲಿಯೇ ಪುಕ್ಕಟೆಯಾಗಿ ಗ್ರಂಥಾಲಯ ಸೇವೆ ಸಲ್ಲಬೇಕೆಂದೂ ಸೂಚಿಸಿ, ಈ ಉದ್ದೇಶ ಸಾಧನೆಗಾಗಿ ೨೫ ವರುಷಗಳ ಯೋಜನೆಯೊಂದನ್ನು ರೂಪಿಸಿದೆ.

ಈ ಯೋಜನೆಯ ರೂಪರೇಷೆಗಳನ್ನು ವಿಹಂಗಮವಾಗಿ ಈ ಕೆಳಗಿನಂತೆ ವಿಂಗಡಿಸಬಹುದು:

ಯೋಜನೆಯನ್ವಯ ದೇಶದಲ್ಲಿನ ಪ್ರತಿಯೊಂದು ಸ್ಥಾನಿಕ ಸಂಸ್ಥೆಯು ಆಸ್ತಿಯ ತೆರಿಗೆಯ ಮೇಲೆ ರೂಪಾಯಿಗೆ ಆರು ಪೈಸೆಯಂತೆ ಕರವನ್ನು ಆಕರಿಸಿ ಗ್ರಂಥಾಲಯ ಸೇವೆಯ ಮೂಲ ನಿಧಿಯನ್ನು ಸಂಗ್ರಹಿಸಬೇಕು.

ಈ ಮೂಲ ನಿಧಿಗೆ ಸಂಬಂಧಪಟ್ಟ ರಾಜ್ಯ ಸರಕಾರ ಹಾಗೂ ಕೇಂದ್ರ ಸರಕಾರ ಪ್ರಾರಂಭದಲ್ಲಿ ತಮ್ಮ ವಂತಿಗೆಯಾಗಿ ಮೂಲ ನಿಧಿಗೆ ಸರಿಸಮವಾದ ಪಾಲನ್ನು ಕೊಡಬೇಕು: ಮತ್ತು ರಾಜ್ಯಸರಕಾರ ೨೫ ವರುಷಗಳ ಅವಧಿಯಲ್ಲಿ ತನ್ನ ವಂತಿಗೆಯನ್ನು ಕ್ರಮೇಣ ಮೂಲನಿಧಿಯ ಮೂರು ಪಟ್ಟಿಗೆ ಬೆಳೆಸಬೇಕು.

‘ಸರ್ವರಿಗೂ ಗ್ರಂಥಾಲಯಗಳು’ ಎಂಬ ಈ ಯೋಜನೆಯ ಭವ್ಯ ಕಟ್ಟಡದ ಕಳಸವಾಗಿ ರಾಷ್ಟ್ರೀಯ ಕೇಂದ್ರ

ಗ್ರಂಥಾಲಯು ಹಾಗೂ ತಳಹದಿಯಾಗಿ ಪಂಚಾಯುತ ಗ್ರಂಥಾ-ಲಯುಗಳು ಹಾಗೂ ಇವುಗಳ ಮಧ್ಯೆ ಕಟ್ಟಡದ ಶರೀರವಾಗಿ ರಾಜ್ಯ, ಜಿಲ್ಹಾ ಗುಂಪಿನ (Block) ಗ್ರಂಥಾಲಯು ಗಳಿರಬೇಕು.

ಮಕ್ಕಳಿಗಾಗಿ ಪಟ್ಟಣ ಗ್ರಂಥಾಲಯುಗಳಲ್ಲಿ ವಿಶೇಷ-ವಿಭಾಗಗಳಿರಬೇಕು.

ಈ ಎಲ್ಲ ಯೋಜನೆ ತ್ವರಿತವಾಗಿ ಕಾರ್ಯ ಮಾಡಲು ಪ್ರತಿಯೊಂದು ರಾಜ್ಯದಲ್ಲೂ ಸರ್ವ ಸ್ವತಂತ್ರವಾದ ಗ್ರಂಥಾ-ಲಯ ಹಾಗೂ ಸಮಾಜಶಿಕ್ಷಣ ವಿಭಾಗವಿರಬೇಕು. ಮತ್ತು ಈ ವಿಭಾಗವನ್ನು ನೋಡಿಕೊಳ್ಳಲು ಒಬ್ಬ ಡೈರೆಕ್ಟರ ನನ್ನು ನೇಮಿಸಬೇಕು.

ಇದಲ್ಲದೆ ಗ್ರಂಥಗಳ ಅಭಾವ ಶಾಲೆ-ಕಾಲೇಜುಗಳ ಗ್ರಂಥಾಲಯುಗಳು ಮತ್ತು ಸಾರ್ವಜನಿಕ ಗ್ರಂಥಾಲಯುಗಳು, ಇವುಗಳ ನಡುವಿನ ಸಹಕಾರ, ಗ್ರಂಥಪಾಲರ ತರಬೇತಿ, ಅವರ ಸ್ಥಾನ- ಮಾನ, ಗ್ರಂಥಪಾಲರ ಕಾರ್ಯಕ್ಷಮತೆಯನ್ನು ಕುಂದಿಸುವ ಕೆಲವೊಂದು ರೂಢಿಗಳು, ಇವೆಲ್ಲವುಗಳ ಬಗ್ಗೆ ಕ್ರಾಂತಿಕಾರಕವಾದ ಶಿಫಾರಸುಗಳನ್ನು ಸಮಿತಿ ಮಾಡಿದೆ.

ಈ ಎಲ್ಲ ದಿಶೆಗಳಲ್ಲಿ ಸಾಧಿಸಲಾಗುವ ಪ್ರಗತಿಯನ್ನು ಕಾಲಕಾಲಕ್ಕೆ ತೂಗಿ ನೋಡಲು ಕೇಂದ್ರ ಶಿಕ್ಷಣ ಮಂತ್ರಿ-

ಗಳ ಅಧ್ಯಕ್ಷತೆಯಲ್ಲಿ ಅಖಿಲ ಭಾರತ ಗ್ರಂಥಾಲಯ ಸಲಹಾ ಸಮಿತಿಯೊಂದಿರಬೇಕೆಂದೂ ಸಮಿತಿ ಸೂಚಿಸಿದೆ.

ಹೀಗೆ ಚತುರ್ಥ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ನಮ್ಮ ದೇಶ ಗ್ರಂಥಾಲಯ ಕ್ಷೇತ್ರದಲ್ಲಿ ಮತ್ತೊಂದು ದೊಡ್ಡ ಹೆಜ್ಜೆಯನ್ನು ಹಾಕುತ್ತದೆ. ಇದೆಲ್ಲ ಭವ್ಯವಾದ ಭವಿಷ್ಯವನ್ನು ಸೂಚಿಸುತ್ತಿದೆ. ನಿಜಕ್ಕೂ ಭಾರತ ಮತ್ತೊಮ್ಮೆ ಬೆಳಕಿನ ಬೀಡಾಗಲಿದೆ, ಗ್ರಂಥಾಲಯಗಳ ತವರಾಗಲಿದೆ, ಜ್ಞಾನದಾಗರವಾಗಲಿದೆ.

ಇಂಥ ಒಂದು ಸಂಧಿಕಾಲದಲ್ಲಿ ಬಾಳಿ ಬದುಕಿರುವ-ದಕ್ಕೆ ಪುಣ್ಯಬೇಕು. ಅದರಲ್ಲಿಯೂ ತರುಣರಾಗಿ ಹುಮ್ಮಸ್ಸಿ-ನಿಂದ, ಸೇವಾಬುದ್ಧಿಯಿಂದ, ಸೇವೆಗೈಯುವ ಸುಸಂಧಿ ಸಿಗಬೇಕಾದರೆ ವಿಶೇಷ ಪುಣ್ಯ ಬೇಕು. ಇಂಥ ಸಂಧಿ ದೊರೆತ ನಾವೇ ಧನ್ಯರು!

ವರ್ಡ್ಸ್‌ವರ್ಥ್ ಮಹಾಕವಿ ಹಾಡಿದ್ದನ್ನೇ ಸ್ವಲ್ಪ ಮಾರ್ಪಡಿಸಿ ಹೇಳಬೇಕೆಂದರೆ,

"Bliss is it to be alive in this dawn
But to be young is very heaven"



## ನೆರವಾದ ಗ್ರಂಥಗಳು, ಬರಹಗಳು


1. Bombay Library Development Committee: *Report 1940.*
2. Dharma Bhanu:
   *Libraries in Moghul India. (Vikram University Journal. vol. 1. No. 2. May, 1957).*
3. Ghurye (K. G.) :
   *Preservation of learned tradition in India. 1950.*
4. India Government : Ministry of Education: *Libraries in India, 1951.*
5. Kaula (P. N.) Ed.
   *Library movement in India, 1958.*
6. Munshi (K. M.) :
   *Book in India. (Proceedings of the 5th All Library Conference, held in Bombay, India 1942.)*
7. National Library of India, Calcutta :
   *Early printing in India. 1954.*
8. National Library of India, Calcutta :
   *Golden Jubilee Souvenir. 1953*
9. Priolkar (A. K.) :
   *Printing press in India. 1958*
10. Sarkar (Jadunath) :
    *Khuda Bakhsh, the Indian Bodley. (Anecdotes of Aurangzeb and historical essay. 1912).*

೨೩. ಕನ್ನಡನಾಡಿನ ಶಾಸನಗಳು -ಪಿ. ಬಿ. ದೇಸಾಯಿ

೨೪. ಕವೀಂದ್ರ ರವೀಂದ್ರರು -ಎಸ್. ಎಸ್. ಮಾಳವಾಡ

೨೫. ನಾಗಾನಂದ (ದ್ವಿ. ಆ.) -ಎಚ್. ಪಿ. ಮಲ್ಲೇದೇವರು

೨೬. ಜೀವನದಲ್ಲಿ ನಗೆ ( ,, ) -ಎಂ. ಎಸ್. ಸುಂಕಾಪುರ

೨೭. ಬಸವಣ್ಣನವರ ಯೋಜನೆಗಳು (ದ್ವಿ. ಆ.) -ಬಿ. ಸಿ. ಜವಳಿ

೨೮. ೧೮೫೭ರ ಕ್ರಾಂತಿ (ದ್ವಿ. ಆ.) -ಸಿ. ವೀರಬಸಣ್ಣ

೨೯. ಕನ್ನಡ ಕಥಾಸೃಷ್ಟಿ -ಬಿ. ಬಿ. ಮಹೀಶವಾಡಿ

೩೦. ಸಂಸ್ಕೃತ ಸಾಹಿತ್ಯದಲ್ಲಿ ಶೃಂಗಾರರಸ -ಕೆ. ಕೃಷ್ಣಮೂರ್ತಿ

೩೧. ನೀರಾವರಿ ಬೇಸಾಯ -ಎಸ್. ಎ. ಹೊಸಮನಿ

೩೨. ಸಾರ್ವಜನಿಕ ಅಭಿಪ್ರಾಯ -ಎನ್. ರಾಜಗೋಪಾಲರಾವ್

೩೩. ಕನ್ನಡ ಕಾವ್ಯಗಳಲ್ಲಿ
ಕಿರಾತಾರ್ಜುನ ಪ್ರಸಂಗ -ದೇವೇಂದ್ರಕುಮಾರ ಹಕಾರಿ

೩೪. ಕನ್ನಡಕ್ಕೆ ಪುರಂದರದಾಸರು
ನೀಡಿದ ಕೊಡುಗೆ -ಜಿ. ಡಿ. ನಾಡಕರ್ಣಿ

೩೫. ಫ್ಯಾಶನ್ನುಗಳು (೨ನೆಯ ಆವೃತ್ತಿ) -ಕೆ. ಡಿ. ತಂಗೋಡ

೩೬. ಮಹಾಕವಿ ರಾಘವಾಂಕನ
ಪಾತ್ರಗಳಲ್ಲಿ ತತ್ವನಿಷ್ಠೆ -ಬಿ. ವ್ಹಿ. ಮಲ್ಲಾಪುರ

೩೭. ಅಭಿವೃದ್ಧಿ ಯೋಜನೆಗಳಲ್ಲಿ
ಸಹಕಾರದ ಪಾತ್ರ -ಎಸ್. ಜಿ. ಕರಭಂಟನಾಳ

೩೮. ಕನ್ನಡ ಜೈನಪುರಾಣಗಳು -ಸದಾನಂದ ನಾಯಕ

೩೯. ಕನ್ನಡ ನಾಟ್ಯಸೃಷ್ಟಿ -ಎಚ್. ಜಿ. ಲೋಕೂರ

೪೦. ಹರಿಹರನು ಚಿತ್ರಿಸಿದ ಶಿವಶರಣೆಯರು -ಬಿ. ಬಿ. ಹೆಂಡಿ

೪೧. ನೀವು ಬಯಸುವ ಮಗು
ಗಂಡೊ ? ಹೆಣ್ಣೊ ? -ಕೆ. ಆರ್. ರಾಮಸ್ವಾಮಿ

೪೨. ಅಂಡಯ್ಯ ಬಿ. ಎಸ್. ಕುಲಕರ್ಣಿ

೪೩. ಬೆಳವಲನಾಡಿನ ಬೆಳೆಗಳು -ಎಸ್. ಎ. ಹೊಸಮನಿ

೪೪. ಜಾನಪದ ಕಥೆಗಳು -ಎಲ್. ಆರ್. ಹೆಗಡೆ

೪೫. ಸುಧಾರಿಸಿದ ಬೇಸಾಯ -ಎ. ಸಿ. ಕಲ್ಯಾಣಿಮಠ

೪೬. ಕನ್ನಡನಾಡಿನ ಐತಿಹಾಸಿಕ ಮಹಾಪುರುಷರು
-ಬಿ. ಆರ್. ಗೋಪಾಲ್

೪೭. ಗ್ರಂಥಾಲಯದ ಅಂತರಂಗ -ಎಸ್. ಆರ್. ಗುಂಜಾಳ

೪೮. ಸ್ತ್ರೀ ಮತ್ತು ಶಿಕ್ಷಣ -ವನಮಾಲಾ ಆಚಾರ್

೪೯. ಜಾಗತಿಕ ಸರಕಾರ -ಸಿ. ವೀರಬಸಣ್ಣ
೫೦. ಸಮುದಾಯ ಸಂಘಟನೆ -ಎಚ್. ಎಂ. ಮರುಳಸಿದ್ದಯ್ಯ
೫೧. ಅಶೋಕನ ಧರ್ಮಶಾಸನಗಳು -ಶ್ರೀನಿವಾಸ ರಿತ್ತಿ
೫೨. ಪ್ರಾಚೀನ ಭಾರತದ ರಾಜ್ಯಪದ್ಧತಿ -ಸಿ. ವ್ಹಿ. ರಂಗಸ್ವಾಮಿ
೫೩. ಅಕ್ಕಮಹಾದೇವಿ ಮತ್ತು ಮೀರಾಬಾಯಿ - ಎಸ್. ಎಸ್. ಕಬ್ಬಿನ
೫೪. ಕನ್ನಡ ಕಾವ್ಯದಲ್ಲಿ ವೀರರಸ ನಿರೂಪಣೆ - ಬಿ. ಬಿ. ಮಹೀಶವಾಡಿ
೫೫. ಹರಿಹರ ಮಹಾಕವಿಯ ಕೆಲವು
ಮಹೋನ್ನತ ವಿಚಾರಗಳು -ಬಿ. ಸಿ. ಜವಳಿ
೫೬. ಭಾರತ ರಾಜ್ಯಘಟನೆ -ಎಂ. ಎಸ್. ಪಾಟೀಲ
೫೭. ಪಂಚಾಯತಿ ರಾಜ್ಯ -ಎಸ್. ಜಿ. ಕರಘಂಟಿಸಾಳ ಮತ್ತು
ಕೆ. ಡಿ. ಬಸವ
೫೮. ವಿಷಮಜ್ವರ -ಪಿ. ಎಸ್. ಶಂಕರ
೫೯. ಪುಸ್ತಕ ಭಾಂಡಾರ ಕಾಯದೆ -ಜಿ. ಎಂ. ಪಾಟೀಲ
೬೦. ಸರ್. ಐಸಾಕ್ ನ್ಯೂಟನ್ -ಆರ್. ವ್ಹಿ. ಅಬ್ಬಿಗೇರಿ
೬೧. ಗ್ರಾಮಾಭ್ಯುದಯದ ಯೋಜನಾಂಗಗಳು -ಟಿ. ಕೆ. ಮೋಟಿ
೬೨. ಹರಿಜನರ ಸಮಸ್ಯೆಗಳು ಹಾಗು
ಅವುಗಳ ಪರಿಹಾರ -ಎನ್. ಕೆ. ಕಡೆತೋಟದ
೬೩. ರಾಸಾಯನಿಕ ಕಿಣ್ವಗಳು -ಎಂ. ಎಸ್. ಎಸ್. ರಾವ್
೬೪. ಪ್ರಜಾಪ್ರಭುತ್ವದ ಮೂಲತತ್ವಗಳು -ಕೆ. ಬಿ. ಬಕ್ಕಪ್ಪ
೬೫. ಹೃದಯಾಘಾತ -ಪಿ. ಎಸ್. ಶಂಕರ್
೬೬. ಆಭರಣಗಳ ಬಗೆಗೆ ಸಾಮಾಜಿಕ
ದೃಷ್ಟಿಕೋನ -ಡಿ. ಎ. ಜೆಕ್ಕಿ
೬೭. ಶ್ರೀ ರಾಮಾಯಣ ದರ್ಶನದಲ್ಲಿ ಕುವೆಂಪು ಸೃಜಿಸಿದ
ಮೂರು ಪಾತ್ರಗಳು -ಎಂ. ಜಿ. ಬಿರಾದಾರ
೬೮. ಯೋಜನೆಗಳೇಕೆ ಬೇಕು? -ಎಸ್. ಎಸ್. ಯಮ್ಮಿ
೬೯. ಸಗರನಾಡಿನ ಶಿವಶರಣರು -ವ್ಹಿ. ಶಿವಾನಂದ
೭೦. ವಿಜ್ಞಾನದ ದೃಷ್ಟಿಯಲ್ಲಿ ಸೃಷ್ಟಿ -ಆರ್. ಎಸ್. ಭೂಸನೂರಮಠ
೭೧. ವಿಜಯನಗರದ ನಿರ್ಣಾಯಕ ಯುದ್ಧ -ಎಸ್. ಬಿ. ಕೋಡದ
೭೨. ಬಸವಣ್ಣನವರನ್ನು ಕುರಿತ
ಶಾಸನಗಳು -ಎಂ. ಎಂ. ಕಲಬುರ್ಗಿ
೭೩. ಆಧುನಿಕ ಭಾಷಾವಿಜ್ಞಾನ -ಜೆ. ಎಸ್. ಕುಳ್ಳಿ